## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಯನ್ನು ಪುನರ್‌ರಚಿಸುವ ಕುರಿತು.

**ಓದಲಾಗಿದೆ :**
1. ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ, 2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಐ 162 ಎಸ್‌ಪಿಐ 2001, ದಿ: 6.08.2001.
3. ಸರ್ಕಾರಿ ಆದೇಶ ಸಂಖ್ಯೆ: ಸಿಐ 162 ಎಸ್‌ಪಿಐ 2001, ದಿ: 21.08.2002.
4. ಅಧಿಸೂಚನೆ ಸಂಖ್ಯೆ: ಸಿಐ 162 ಎಸ್‌ಪಿಐ 2001, ದಿ: 26.07.2004.
5. ಸರ್ಕಾರಿ ಆದೇಶ ಸಂಖ್ಯೆ: ಸಿಐ 305 ಎಸ್‌ಪಿಐ 2008, ದಿ: 17.10.2008.
6. ಸರ್ಕಾರಿ ಆದೇಶ ಸಂಖ್ಯೆ: ಸಿಐ 105 ಎಸ್‌ಪಿಐ 2013(1), ದಿ: 21.06.2013.
7. ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2013.
8. ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2015ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 50 ಶಾಸನ 2015, ದಿ:28.12.2015.

**ಪ್ರಸ್ತಾವನೆ :**

ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ, 2002ರ ಪರಿಚ್ಛೇದ 3(1), 6(1) ಹಾಗೂ 9(1)ರ ಪ್ರಕಾರ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ, ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿ ಹಾಗೂ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಗಳನ್ನು ರಚಿಸುವ ಅಧಿಕಾರವನ್ನು ರಾಜ್ಯ ಸರ್ಕಾರವು ಹೊಂದಿದೆ. ಅದರನ್ವಯ, ಮೇಲೆ ಓದಲಾದ (2)ರ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ₹. 3.00 ಕೋಟಿವರೆಗಿನ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ, ₹. 3.00 ಕೋಟಿಯಿಂದ ₹. 50 ಕೋಟಿವರೆಗಿನ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಹಾಗೂ ₹. 50 ಕೋಟಿ ಮೇಲ್ಪಟ್ಟ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಅಧ್ಯಕ್ಷತೆಯಲ್ಲಿ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಯನ್ನು ರಚಿಸಲಾಗಿರುತ್ತದೆ.

ಮೇಲೆ ಓದಲಾದ (3) & (4)ರಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳನ್ನು ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಯ ಅಧ್ಯಕ್ಷರನ್ನಾಗಿ ಹಾಗೂ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರನ್ನು ಸದಸ್ಯರನ್ನಾಗಿ, ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಗೆ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರನ್ನು ಅಧ್ಯಕ್ಷರನ್ನಾಗಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರನ್ನು ಸದಸ್ಯರನ್ನಾಗಿ ನೇಮಿಸಲಾಗಿರುತ್ತದೆ.

ಮೇಲೆ ಓದಲಾದ (5)ರ ಆದೇಶದಲ್ಲಿ ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರನ್ನು ಅಧ್ಯಕ್ಷರನ್ನಾಗಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರನ್ನು ಉಪಾಧ್ಯಕ್ಷರನ್ನಾಗಿ ನೇಮಿಸಲಾಗಿರುತ್ತದೆ.

ಮೇಲೆ ಓದಲಾದ (6)ರಲ್ಲಿ ಆದೇಶದಲ್ಲಿ ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಗೆ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಲಾಗಿರುತ್ತದೆ.

ಮೇಲೆ ಓದಲಾದ (8)ರಲ್ಲಿ ಬಂಡವಾಳ ಹೂಡಿಕೆ ಪ್ರಸ್ತಾವನೆಗಳು ತ್ವರಿತವಾಗಿ ಮತ್ತು ಯಶಸ್ವಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ₹.500 ಕೋಟಿಗೂ ಹೆಚ್ಚಿನ ಬಂಡವಾಳ ಹೂಡಿಕೆಯ ಪ್ರಸ್ತಾವನೆಗಳಿಗೆ ಅನುಮೋದನೆಯನ್ನು ನೀಡುವ ಅಧಿಕಾರವನ್ನು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿಯನ್ನು, ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಅಧ್ಯಕ್ಷತೆಯಲ್ಲಿ ₹.15 ಕೋಟಿಯಿಂದ ₹. 500 ಕೋಟಿವರೆಗಿನ ಬಂಡವಾಳ ಹೂಡಿಕೆಯ ಪ್ರಸ್ತಾವನೆಗಳಿಗೆ ಅನುಮೋದನೆಯನ್ನು ನೀಡಲು ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಯನ್ನು ರಚಿಸಲು ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2015ರ ಪರಿಚ್ಛೇದ 3(i), (ii) & 6(i), (ii) ರಲ್ಲಿ ತಿದ್ದುಪಡಿ ಮಾಡಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 25 ಎಸ್‌ಪಿಐ 2016, ಬೆಂಗಳೂರು, ದಿನಾಂಕ: 27.01.2016.**

ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) (ತಿದ್ದುಪಡಿ) ಅಧಿನಿಯಮ, 2015ರ ಪರಿಚ್ಛೇದ 6(i), (ii) ರಲ್ಲಿ ತಿದ್ದುಪಡಿಯನ್ವಯ ₹.15 ಕೋಟಿಯಿಂದ ₹.500 ಕೋಟಿವರೆಗಿನ ಬಂಡವಾಳ ಹೂಡಿಕೆಯ ಪ್ರಸ್ತಾವನೆಗಳಿಗೆ ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಯು ಅನುಮೋದನೆಯನ್ನು ನೀಡುವ ಅಧಿಕಾರ ಹೊಂದಿರುತ್ತದೆ. ಮೇಲ್ಕಂಡ ತಿದ್ದುಪಡಿಯನ್ವಯ, ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ:

| | | |
|---|---|---|
| 1. | ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು | ಅಧ್ಯಕ್ಷರು |
| 2. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಸದಸ್ಯರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 4. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | ಸದಸ್ಯರು |

| | | |
|---|---|---|
| 5. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರವಾಸೋದ್ಯಮ ಇಲಾಖೆ | ಸದಸ್ಯರು |
| 6. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 7. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |
| 8. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ | ಸದಸ್ಯರು |
| 9. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 10. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 11. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 12. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮೂಲಸೌಕರ್ಯ ಅಭಿವೃದ್ಧಿ ಇಲಾಖೆ | ಸದಸ್ಯರು |
| 13. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 14. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಐಟಿ/ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | ಸದಸ್ಯರು |
| 15. | ಸರ್ಕಾರದ ಕಾರ್ಯದರ್ಶಿಗಳು (ಎಂಎಸ್‌ಎಂಇ, ಗಣಿ ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 16. | ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | ಸದಸ್ಯರು |
| 17. | ಮುಖ್ಯ ಕಾರ್ಯನಿರ್ವಹಣಾಧಿಕಾರಿ ಮತ್ತು ಕಾರ್ಯ ನಿರ್ವಾಹಕ ಸದಸ್ಯರು, ಕೆಐಎಡಿಬಿ | ಸದಸ್ಯರು |
| 18. | ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**ವಿಶೇಷ ಆಹ್ವಾನಿತರು**

| | |
|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಇಲಾಖೆ |
| 2. | ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್, ಬೆಂಗಳೂರು |
| 3. | ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಐಡಿಸಿ, ಬೆಂಗಳೂರು |
| 4. | ಆಯುಕ್ತರು, ಬಿಎಂಆರ್‌ಡಿಎ, ಬೆಂಗಳೂರು |
| 5. | ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ನಿರ್ದೇಶಕರು, ಸಕ್ಕರೆ, ಬೆಂಗಳೂರು |
| 6. | ವ್ಯವಸ್ಥಾಪಕ ನಿರ್ದೇಶಕರು, ಕೆಯುಡಬ್ಲ್ಯೂಎಸ್‌ಡಿಬಿ, ಬೆಂಗಳೂರು |
| 7. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು |
| 8. | ಆಯುಕ್ತರು, ಅಬಕಾರಿ ಇಲಾಖೆ, ಬೆಂಗಳೂರು |
| 9. | ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| 10. | ನಿರ್ದೇಶಕರು, ನಗರ ಯೋಜನೆ, ಬೆಂಗಳೂರು |
| 11. | ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು |
| 12. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ, ಬೆಂಗಳೂರು |
| 13. | ಸದಸ್ಯ ಕಾರ್ಯದರ್ಶಿ, ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ, ಬೆಂಗಳೂರು. |

ಸಮಿತಿಯು ಸಭೆಗೆ ಅವಶ್ಯವಿರುವ ಇತರೆ ಇಲಾಖೆಗಳ ಮುಖ್ಯಸ್ಥರು/ಅಧಿಕಾರಿಗಳನ್ನು ಆಹ್ವಾನಿಸಬಹುದು.

**PR. 209**

**SC. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಉಮಾದೇವಿ,**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** 2014–00–114–0–02–071 ಕಟ್ಟಡ ವೆಚ್ಚಗಳು ಲೆಕ್ಕಶೀರ್ಷಿಕೆಯಿಂದ 2014–00–114–0–02–041 ಪ್ರಯಾಣವೆಚ್ಚಗಳು ಲೆಕ್ಕಶೀರ್ಷಿಕೆಗೆ ₹.10,00,000–00 ಪುನರ್ವಿನಿಯೋಗ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ಲೆಕ್ಕ-1/143/2015–16, ದಿನಾಂಕ: 19.01.2016 ಮತ್ತು 03.02.2016.

**ಪ್ರಸ್ತಾವನೆ :**

ಮೇಲೆ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದಲ್ಲಿ 2015–16ರ ಸಾಲಿನ ಅಂದಾಜು ಆಯವ್ಯಯ ಪಟ್ಟಿಯನ್ನು ಸಲ್ಲಿಸಿದಾಗ 2014–00–114–0–02–041 ಪ್ರಯಾಣವೆಚ್ಚಗಳು ಲೆಕ್ಕಶೀರ್ಷಿಕೆಯಲ್ಲಿ ಈ ಇಲಾಖೆಗೆ ₹.50 ಲಕ್ಷ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರದಲ್ಲಿ ವಿನಂತಿಸಲಾಗಿತ್ತು, ಆದರೆ, ಈ ಇಲಾಖೆಗೆ 2015–16ನೇ ಸಾಲಿನಲ್ಲಿ 041– ಪ್ರಯಾಣವೆಚ್ಚಗಳು ಲೆಕ್ಕಶೀರ್ಷಿಕೆಯಡಿಯಲ್ಲಿ ₹.26,00,000–00 ಅನುದಾನವನ್ನು ಮಾತ್ರ ಬಿಡುಗಡೆ ಮಾಡಿದ್ದು, ಸದರಿ ಅನುದಾನವನ್ನು ಮರು ಹಂಚಿಕೆ ಮಾಡಲಾಗಿದೆ. ಸದರಿ ಶೀರ್ಷಿಕೆಯಲ್ಲಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಅಧೀನ ಕಛೇರಿಗಳಿಂದ ಬೇಡಿಕೆಗಳು ಬಂದಿದ್ದು, ಬಾಕಿ ಇರುವ ಬಿಲ್ಲುಗಳ ಒಟ್ಟು ಮೊತ್ತ ₹.15,97,432–00 ಮತ್ತು ಕೇಳಿರುವ ಹೆಚ್ಚುವರಿ ಬಿಲ್ಲುಗಳ ಒಟ್ಟು ಮೊತ್ತ ₹.17,00,000–00 ಇರುತ್ತದೆ. ಆಡಳಿತಾತ್ಮಕ ಇಲಾಖೆಗಳಿಗೆ ₹.50 ಲಕ್ಷದವರೆಗೆ ಪುನರ್ವಿನಿಯೋಗ ಮಾಡುವ ಅಧಿಕಾರ ಇರುತ್ತದೆ. ಆದ್ದರಿಂದ, 2014–00–114–0–02–071 ಕಟ್ಟಡ ವೆಚ್ಚಗಳು ಲೆಕ್ಕಶೀರ್ಷಿಕೆಯಿಂದ 2014–00–114–0–02–041 ಪ್ರಯಾಣವೆಚ್ಚಗಳು ಲೆಕ್ಕಶೀರ್ಷಿಕೆಗೆ ₹.10,00,000–00 ಪುನರ್ವಿನಿಯೋಗ ಮಾಡುವ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸಬೇಕೆಂದು ಅಭಿಯೋಗ ನಿರ್ದೇಶಕರು ಕೋರಿರುತ್ತಾರೆ. ಈ ಪ್ರಸ್ತಾವನೆಯ ಕೆ.ಎಫ್.ಸಿ ಪ್ರಪತ್ರ 22(ಎ) ಅನ್ನು ತಿದ್ದುಪಡಿ ಮಾಡಿ, ಪರಿಷ್ಕೃತ ಕೆ.ಎಫ್.ಸಿ ಪ್ರಪತ್ರ 22(ಎ) ಅನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2015–16ರ ಸಾಲಿನ ಅಂದಾಜು ಆಯವ್ಯಯ ಪಟ್ಟಿಯನ್ನು ಸಲ್ಲಿಸಿದಾಗ 2014–00–114–0–02–041 ಪ್ರಯಾಣವೆಚ್ಚಗಳು (ಯೋಜನೇತರ) ಅಡಿಯಲ್ಲಿ ₹.26.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ಈ ಲೆಕ್ಕಶೀರ್ಷಿಕೆಯಲ್ಲಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಬೇಕೆಂದು ಅಧೀನ ಕಛೇರಿಗಳಿಂದ ಬೇಡಿಕೆ ಬಂದಿದ್ದು, ಪ್ರಸ್ತುತ ಬಾಕಿ ಇರುವ ಬಿಲ್ಲುಗಳ ಮೊತ್ತವನ್ನು ಪರಿಗಣಿಸಿದಲ್ಲಿ ₹.16,50,000.00 ಹೆಚ್ಚುವರಿ ಅನುದಾನದ ಅವಶ್ಯಕತೆ ಇದ್ದು. ಲೆಕ್ಕಶೀರ್ಷಿಕೆ 2014–00–114–0–02–071 ಕಟ್ಟಡ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ವಾಸ್ತವಿಕ ವೆಚ್ಚ ಕಳೆದು ₹.12,50,000.00 ಗಳ ಉಳಿತಾಯವಾಗುವ ನಿರೀಕ್ಷೆಯಿರುವುದರಿಂದ ಆ ಮೊತ್ತದಲ್ಲಿ ₹.10,00ಲಕ್ಷಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ 2014–00–114–0–02–041 ಪ್ರಯಾಣ ವೆಚ್ಚಗಳು (ಯೋಜನೇತರ) ಅಡಿಗೆ ಧನ ಪುನರ್ವಿನಿಯೋಗ ಮಾಡಲು ಕೋರಿರುವ ಪ್ರಸ್ತಾವನೆಗೆ ಯಾವುದೇ ಕಾರಣಕ್ಕೂ ಈ ಲೆಕ್ಕಶೀರ್ಷಿಕೆಯಡಿ ಹೆಚ್ಚುವರಿ ಅನುದಾನಕೋರಬಾರದೆಂಬ ಷರತ್ತಿಗೊಳಪಟ್ಟು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 31 ಪಿಪಿಇ 2016, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2015–16ರ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2014–00–114–0–02–041 ಪ್ರಯಾಣವೆಚ್ಚಗಳು (ಯೋಜನೇತರ) ಅಡಿಯಲ್ಲಿ ₹.26.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು, ಪ್ರಸ್ತುತ ಬಾಕಿ ಇರುವ ಬಿಲ್ಲುಗಳ ಮೊತ್ತವನ್ನು ಪರಿಗಣಿಸಲು ಲೆಕ್ಕಶೀರ್ಷಿಕೆ 2014–00–114–0–02–071 ಕಟ್ಟಡ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಉಳಿತಾಯವಾಗುವ ಮೊತ್ತದಲ್ಲಿ ₹.10.00ಲಕ್ಷಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ 2014–00–114–0–02–041 ಪ್ರಮಾಣ ವೆಚ್ಚಗಳು (ಯೋಜನೇತರ) ಅಡಿಗೆ ಯಾವುದೇ ಕಾರಣಕ್ಕೂ ಈ ಲೆಕ್ಕಶೀರ್ಷಿಕೆಯಡಿ ಹೆಚ್ಚುವರಿ ಅನುದಾನಕೋರಬಾರದೆಂಬ ಷರತ್ತಿಗೊಳಪಟ್ಟು, ಧನ ಪುನರ್ವಿನಿಯೋಗ ಮಾಡಲು ಆದೇಶಿಸಿದೆ.

ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇಧ–308ರ ಪ್ರಪತ್ರವನ್ನು ಇದರೊಂದಿಗೆ ಲಗತ್ತಿಸಿದೆ.

ಸದರಿ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರು, ಒಳಾಡಳಿತ ಇಲಾಖೆ ಇವರ ಟಿಪ್ಪಣಿ ಸಂಖ್ಯೆ:ಒಸಾಇ 4525 ಆಂಆಸ 2016, ದಿನಾಂಕ:06.02.2016 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.(ಪೊಲೀಸು ಸೇವೆಗಳು–ಬಿ)

ಪ್ರಪತ್ರ 22 ಎ– ಕೆ.ಎಫ್.ಸಿ. (ಅನುಚ್ಛೇದ 308)

ಆಯವ್ಯಯ ಪತ್ರದಲ್ಲಿ ಅಥವಾ ಹೆಚ್ಚಿನ ಹಣ ಹಂಚಿಕೆ (ಅಲಾಟ್‌ಮೆಂಟ್)ಗಳಲ್ಲಿ ಉಪಬಂಧ ಕಲ್ಪಿಸಿಲ್ಲದ ಎಲ್ಲಾ ವಿನಿಯೋಗಗಳಿಗೆ ಅಥವಾ ಮಂಜೂರಾತಿಗೆ ಲಗತ್ತಿಸಬೇಕಾದ ಪುನರ್ವಿಯೋಗದ ವಿವರಣೆ.

| ಮುಂಗಡ ಪತ್ರದ ಪ್ರಧಾನ, ಚಿಕ್ಕ ಉಪ ಮತ್ತು ವಿವರವಾದ ಶೀರ್ಷಿಕೆಗಳು | ಹೆಚ್ಚಿಸಲು ಪ್ರಸ್ತಾಪಿಸಲಾದ ಅಂದಾಜಿನ ಶೀರ್ಷಿಕೆ | | | | ಕಡಿಮೆ ಮಾಡಲು ಪ್ರಸ್ತಾಪಿಸಲಾದ ಅಂದಾಜಿನ ಶೀರ್ಷಿಕೆ | | | | ಷರಾ ಹಣ ಹಂಚಿಕೆ(ಅಲಾಟ್ ಮೆಂಟ್) ಮೀರಿರುವುದಕ್ಕೆ ಮತ್ತು ಉಳಿತಾಯ ನಿರೀಕ್ಷಿಸುವುದಕ್ಕೆ ಕಾರಣಗಳನ್ನು ಇಲ್ಲಿ ಪೂರ್ಣವಾಗಿ ವಿವರಿಸಬೇಕು |
|---|---|---|---|---|---|---|---|---|---|
| | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ(ಎಂದರೆ) (ಅಂದಾಜು) | ವರ್ಷದ ಉಳಿದ ಅವಧಿಯಲ್ಲಿ ಸಂಭವ ನೀಯ ವೆಚ್ಚ | ಬೇಕಾದ ಹೆಚ್ಚಿನ ಅಲಾಟ್‌ಮೆಂಟ್ ವಿವರ | ಮಂಜೂರಾದ ಆಯವ್ಯಯ ಅಂದಾಜಿನಲ್ಲಿರುವ ಮೊತ್ತ | ಈವರೆಗೆ ಆಗಿರುವ ವಾಸ್ತವಿಕ ವೆಚ್ಚ(ಎಂದರೆ) (ಅಂದಾಜು) | ವರ್ಷದ ಉಳಿದ ಅವಧಿಯಲ್ಲಿ ಸಂಭವನೀಯ ವೆಚ್ಚ | ಪುನರ್ವಿನಿಯೋಗಕ್ಕೆ ಲಭ್ಯವಿರುವ ಮೊತ್ತ | |
| **01** | **02** | **03** | **04** | **05** | **06** | **07** | **08** | **09** | **10** |
| 2014–ನ್ಯಾಯಾಪರಿಪಾಲನೆ, 114–ಕಾನೂನು ಸಲಹೆಗಾರರು ಹಾಗೂ ಸಮೂಪದೇಶಕರು, 02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 041–ಪ್ರಯಾಣ ಭತ್ಯೆ | 26,00,000<br>(+)5,00,000*<br>31,00,000 | 31,00,000 | 17,00,000 | 10,00,000 | – | – | – | – | ಹಲವು ಪ್ರಯಾಣ ಭತ್ಯೆ ಬಿಲ್ಲುಗಳು ಮೇಲುಸಹಿಗಾಗಿ ಬಾಕಿ ಇರುವುದರಿಂದ ಅನುದಾನದ ಅವಶ್ಯಕತೆ ಇರುತ್ತದೆ. |
| | 31,00,000 | 31,00,000 | 17,00,000 | 10,00,000 | – | – | – | – | ಹಿಂದಿನ ಬಾಕಿ ಬಾಡಿಗೆಯನ್ನು ಕರ್ನಾಟಕ ಗೃಹ ಮಂಡಳಿಗೆ ಪಾವತಿಸಿದ್ದು, ಈ ಲೆಕ್ಕ ಶೀರ್ಷಿಕೆಯಲ್ಲಿ ಉಳಿತಾಯನ್ನು ನಿರೀಕ್ಷಿಸಲಾಗಿದೆ. |
| 2014–ನ್ಯಾಯಾಪರಿಪಾಲನೆ, 114–ಕಾನೂನು ಸಲಹೆಗಾರರು ಹಾಗೂ ಸಮೂಪದೇಶಕರು, 02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 071–ಕಟ್ಟಡ ವೆಚ್ಚಗಳು. | — | — | — | — | 1,04,00,000<br>(–)5,00,000*<br>99,00,000 | 86,50,000 (ಡಿಸೆಂಬರ್ 2015 ರವರೆಗೆ) | 2,50,000 | 10,00,000 | |
| | | | ಒಟ್ಟು | | 99,00,000 | 86,50,000 | 2,50,000 | 10,00,000 | |

PR. 208

ದೇವೆಂದ್ರಪ್ಪ ಕಟ್ಟಿಮನಿ,
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.(ಪೊಲೀಸು ಸೇವೆಗಳು–ಬಿ)

## ಸಹಕಾರ ಸಚಿವಾಲಯ

**ವಿಷಯ:** ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ತಿಗಾಗಿ ಅನುದಾನ ಬಿಡುಗಡೆ ಆದೇಶ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ:09.12.2013 ಹಾಗೂ ದಿನಾಂಕ: 03.01.2014 ಮತ್ತು ತಿದ್ದುಪಡಿ ದಿನಾಂಕ: 15.04.2015.

2) ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ: 09.06.2014 ಹಾಗೂ ಸದರಿ ಆದೇಶದ ಮೇಲಿನ ಸಮ ಸಂಖ್ಯೆಯ ತಿದ್ದುಪಡಿಗಳು ದಿನಾಂಕ: 17.01.2015, 31.03.2015, 24.09.2015, 24.09.2015, 02.01.2016 ಮತ್ತು 02.01.2016.

3) ಸರ್ಕಾರದ ಆದೇಶ ಸಂಖ್ಯೆ ಸಿಒ 212 ಸಿಎಲ್ಎಸ್ 2013, ದಿನಾಂಕ: 25.06.2014.

4) ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ: 10.10.2014 ಮತ್ತು ಸದರಿ ಆದೇಶದ ಮೇಲಿನ ತಿದ್ದುಪಡಿಗಳು ದಿನಾಂಕ: 09.03.2015 ಮತ್ತು 12.01.2015.

5) ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ: 09.03.2015 ಮತ್ತು ಸದರಿ ಆದೇಶದ ಮೇಲಿನ ತಿದ್ದುಪಡಿಗಳು ದಿನಾಂಕ: 31.03.2015, 21.05.2015, 22.04.2015, 02.05.2015, 16.06.2015, 25.06.2015, 18.08.2015, 18.08.2015, 18.08.2015, 03.09.2015, 20.10.2015, 20.10.2015, 02.01.2016, 02.01.2016 ಮತ್ತು 02.01.2016.

6) ಸಹಕಾರ ಸಂಘಗಳ ನಿಬಂಧಕರು ಇವರ ಪತ್ರ ಸಂಖ್ಯೆ ಆರ್‌ಸಿಎಸ್: ಬಿಯುಡಿ: 62:15–16, ದಿನಾಂಕ: 17.12.2015.

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2013–14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾದ ರೂ. 10.00 ಕೋಟಿ ಅನುದಾನದಲ್ಲಿ ರೂ. 300.00 ಲಕ್ಷಗಳನ್ನು ಪೂರಕ ಅಂದಾಜಿನಲ್ಲಿ ಮಂಜೂರು ಮಾಡಿದ್ದು, ಸದರಿ ಹಣವನ್ನು 24 ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಹಣ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಮೇಲೆ (2), (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2014–15ನೇ ಸಾಲಿನ ಮೊದಲನೇ ಪೂರಕ ಅಂದಾಜಿನಲ್ಲಿ ರೂ. 700.00 ಲಕ್ಷಗಳ ಅನುದಾನ ಒದಗಿಸಿದ್ದು, ಈ ಪೈಕಿ ಶೇ.25 ರಷ್ಟು ಅಂದರೆ ರೂ. 175 ಲಕ್ಷಗಳ ಅನುದಾನವನ್ನು 74 ಸಹಕಾರ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣ, ವಿಸ್ತರಣೆ ಮತ್ತು ದುರಸ್ತಿ ಕಾಮಗಾರಿಗಳಿಗಾಗಿ ಲೆಕ್ಕ ಶೀರ್ಷಿಕೆ 2425–00–108–0–70–100 (ಯೋಜನೆ) ಧನಸಹಾಯ/ ಪರಿಹಾರ ರಡಿ ಮೊದಲನೇ ಕಂತಾಗಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2014–15ನೇ ಸಾಲಿನ ಎರಡನೇ ಪೂರಕ ಅಂದಾಜಿನಲ್ಲಿ ಒದಗಿಸಿರುವ ರೂ. 700.00 ಲಕ್ಷಗಳ ಅನುದಾನ ಪೈಕಿ ಮಂಜೂರಾಗಿರುವ ರೂ. 350 ಲಕ್ಷಗಳ ಅನುದಾನವನ್ನು 96 ಸಹಕಾರ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣ, ವಿಸ್ತರಣೆ ಮತ್ತು ದುರಸ್ತಿ ಕಾಮಗಾರಿಗಳಿಗಾಗಿ ಲೆಕ್ಕ ಶೀರ್ಷಿಕೆ 2425–00–108–0–70–100 (ಯೋಜನೆ) ಧನಸಹಾಯ/ಪರಿಹಾರ ರಡಿ ಬಿಡುಗಡೆ ಮಾಡಲಾಗಿದೆ.

ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಹಾಗೂ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ/ಟಿಎಪಿಸಿಎಂಎಸ್‌ಗಳ ಕಟ್ಟಡ ನಿರ್ಮಾಣ, ವಿಸ್ತರಣೆ ಮತ್ತು ದುರಸ್ತಿ ಯೋಜನೆಗೆ 2013–14ನೇ ಸಾಲಿನಲ್ಲಿ ರೂ. 300.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು ಹಾಗೂ 2014–15ನೇ ಸಾಲಿನಲ್ಲಿ ರೂ. 1400.00 ಲಕ್ಷಗಳ ಆಯವ್ಯಯ ಅವಕಾಶದಲ್ಲಿ ರೂ. 525.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಒಟ್ಟಾರೆ, ರೂ. 1700.00 ಲಕ್ಷಗಳನ್ನು ಒದಗಿಸಿರುವ ಆಯವ್ಯಯ ಅವಕಾಶದಲ್ಲಿ ರೂ. 825.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುವುದಾಗಿ ತಿಳಿಸಿ, ಬಿಡುಗಡೆಗೆ ಬಾಕಿ ಇರುವ ಅನುದಾನ ರೂ. 875.00 ಲಕ್ಷಗಳನ್ನು 2015–16ನೇ ಸಾಲಿನಲ್ಲಿ ಪಶುಭಾಗ್ಯ ಯೋಜನೆಯಡಿ ಲೆಕ್ಕ ಶೀರ್ಷಿಕೆ 2425–00–107–2–41–106ರಡಿ ಉಳಿತಾಯವಾಗುವ ರೂ. 1424.00 ಲಕ್ಷಗಳಲ್ಲಿ ರೂ. 875.00 ಲಕ್ಷಗಳನ್ನು ಪುನರ್ವಿನಿಯೋಗದ ಮುಖಾಂತರ ಲೆಕ್ಕ ಶೀರ್ಷಿಕೆ 2425–00–108–0–70–100 (ಯೋಜನೆ)ಗೆ ಮರು ಹೊಂದಾಣಿಕೆ ಮಾಡಿಕೊಳ್ಳಲು ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಹಿನ್ನೆಲೆಯಲ್ಲಿ ಮರು ಹೊಂದಾಣಿಕೆ ತಃಖ್ತೆಯೊಂದಿಗೆ ಅನುದಾನ ಬಿಡುಗಡೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ಬೆಂಗಳೂರು, ದಿನಾಂಕ: 05.02.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ತಿ ಕಾಮಗಾರಿಗಳಿಗಾಗಿ 2015–16ನೇ ಸಾಲಿನಲ್ಲಿ ರೂ 875.00 ಲಕ್ಷಗಳ (ಎಂಟುನೂರ ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅನುದಾನ ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ (2), (3) ಮತ್ತು (4) ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2014–15ನೇ ಸಾಲಿನಲ್ಲಿ ಮೊದಲನೇ ಪೂರಕ ಅಂದಾಜಿನಲ್ಲಿ ಒದಗಿಸಲಾದ ರೂ.700 ಲಕ್ಷಗಳಲ್ಲಿ ಸದರಿ ಅನುದಾನದ ಶೇ. 25 ರಷ್ಟು ಅಂದರೆ ರೂ. 175.00 ಲಕ್ಷಗಳನ್ನು 74 ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಬಿಡುಗಡೆ ಮಾಡಿದ್ದು ಇದೀಗ ಒದಗಿಸಲಾದ ರೂ. 875 ಲಕ್ಷಗಳಲ್ಲಿ ರೂ. 525 ಲಕ್ಷಗಳನ್ನು (ಐದುನೂರ ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಈ ಆದೇಶದ ಅನುಬಂಧ–1 ರಲ್ಲಿ ನಮೂದಿಸಿರುವ 74 ಸಹಕಾರ ಸಂಘಗಳಿಗೆ ಕಲಂ–5 ರಂತೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿದೆ.

ಮೇಲೆ (5)ರ ಸರ್ಕಾರಿ ಆದೇಶಗಳಲ್ಲಿ 2014–15ನೇ ಸಾಲಿನಲ್ಲಿ ಎರಡನೇ ಪೂರಕ ಅಂದಾಜಿನಲ್ಲಿ ಒದಗಿಸಲಾದ ರೂ.700 ಲಕ್ಷಗಳಲ್ಲಿ ಶೇ.50 ರಷ್ಟು ಅನುದಾನ ರೂ. 350.00 ಲಕ್ಷಗಳನ್ನು 96 ಸಹಕಾರ ಸಂಘಗಳಿಗೆ ಹಂಚಿಕೆ ಮಾಡಿ ಬಿಡುಗಡೆ ಮಾಡಿದ್ದು, ಇದೀಗ ಒದಗಿಸಲಾದ ರೂ. 875 ಲಕ್ಷಗಳಲ್ಲಿ ರೂ. 350.00 ಲಕ್ಷಗಳನ್ನು (ಮುನ್ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಈ ಆದೇಶದ ಅನುಬಂಧ–2 ರಲ್ಲಿ ನಮೂದಿಸಿರುವ 95 ಸಹಕಾರ ಸಂಘಗಳಿಗೆ ಕಲಂ–6 ರಂತೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿದೆ.

ಈ ಹಣವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕದಿಂದ 09–12–2013 ರಲ್ಲಿ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ತಿಗಾಗಿ ವಿಧಿಸಿರುವ ಎಲ್ಲ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ. ಈ ಷರತ್ತುಗಳು ಉಲ್ಲಂಘನೆಯಾಗದಂತೆ ಸಹಕಾರ ಸಂಘಗಳ ಉಪ ನಿಬಂಧಕರು ವೈಯಕ್ತಿಕ ಮೇಲ್ವಿಚಾರಣೆಯನ್ನು ನಿಯತಕಾಲಿಕವಾಗಿ ನಡೆಸತಕ್ಕದ್ದು. ಅಂತೆಯೇ, ಸಹಕಾರ ಸಂಘಗಳ ಜಂಟಿ ನಿಬಂಧಕರು ಕೂಡ ಈ ಬಗ್ಗೆ ತಪಾಸಣೆ/ಮೇಲ್ವಿಚಾರಣೆ ನಡೆಸತಕ್ಕದ್ದು. ಈ ದಿಸೆಯಲ್ಲಿ ಆದ ಪ್ರಗತಿಯನ್ನು ಕಾಮಗಾರಿ ಪ್ರಾರಂಭವಾದ ಮೂರು ತಿಂಗಳಿಗೊಮ್ಮೆ ಮರು ಸಲ್ಲಿಸತಕ್ಕದ್ದು.

ಮಂಜೂರು ಮಾಡಲಾದ ರೂ. 8.75 ಕೋಟಿಗಳ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯ ಲೆಕ್ಕ ಶೀರ್ಷಿಕೆ 8000–00–260–0–00 ಸಹಕಾರದಡಿ ಬಿಡುಗಡೆ ಮಾಡಿ ನಂತರ ಲೆಕ್ಕ ಶೀರ್ಷಿಕೆ 2425–00–108–0–70–100–ಧನಸಹಾಯ (ಯೋಜನೆ) ಇದರಡಿ ಪೂರಕ ಅಂದಾಜು–3ರಲ್ಲಿ ನಿಧಿಗೆ ಮರು ತುಂಬಲಾಗುವುದು. ಆರ್ಥಿಕ ಇಲಾಖೆಯು ರೂ. 8.75 ಕೋಟಿಗಳನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಈ ಪ್ರತ್ಯೇಕ ಆದೇಶವಿಲ್ಲದೆಯೇ ಈ ಆದೇಶದ ಮೇಲೆಯೇ ಈ ಆದೇಶದಲ್ಲಿ ಮಂಜೂರಾಗಿರುವ ಮೊಬಲಗನ್ನು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಆರ್ಥಿಕ ಇಲಾಖೆಯು ಹೊರಡಿಸಿರುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆ ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಬಿಡುಗಡೆಯಾದ ಅನುದಾನದ ಸಂಪೂರ್ಣ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 375 ವೆಚ್ಚ–2/2015, ದಿನಾಂಕ: 27.01.2016 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

**ಅನುಬಂಧ–1**

ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 05.02.2016

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | ಉದ್ದೇಶ | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಬಾಕಿ ಉಳಿದ ಶೆ.75 ಅನುದಾನ ಬಿಡುಗಡೆ ಮಾಡಿದೆ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| 1 | ಟಿಎಪಿಸಿಎಂಎಸ್, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ | ಕಟ್ಟಡ ದುರಸ್ತಿ ಮತ್ತು ಕಟ್ಟಡ ನಿರ್ಮಾಣ | 50.00 | 37.50 |
| 2 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಹಿರೇಮಗಳೂರು, ಚಿಕ್ಕಮಗಳೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 3 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಮಾಸೂರು, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 4 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಭದ್ರಯ್ಯನಹಳ್ಳಿ, ಹನೂರು ಕ್ಷೇತ್ರ, ಚಾಮರಾಜನಗರ ಜಿಲ್ಲೆ. | ಕಟ್ಟಡ ದುರಸ್ತಿ | 02.00 | 1.50 |
| 5 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ನಿ., ನಗರಂಗೆರೆ, ಚಳ್ಳಕೆರೆ ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 3.75 |
| 6 | ವ್ಯವಸಾಯ ಸೇವಾ ಸಹಕಾರ ಸಂಘ, ಮೇಣೆದಾಳ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ. | ಕಟ್ಟಡ ನಿರ್ಮಾಣ | 10.00 | 7.50 |
| 7 | ವ್ಯವಸಾಯ ಸೇವಾ ಸಹಕಾರ ಸಂಘ, ಬಯ್ಯಾಪುರ, ರಾಯಚೂರು ಜಿಲ್ಲೆ | ಕಟ್ಟಡ ದುರಸ್ತಿ | 02.00 | 1.50 |
| 8 | ವ್ಯವಸಾಯ ಸೇವಾ ಸಹಕಾರ ಸಂಘ, ನಿಯಮಿತ, ಬೆಕ್ಕಳಲೆ, ಮದ್ದೂರು ತಾಲ್ಲೂಕು | ಕಟ್ಟಡ ನಿರ್ಮಾಣ | 15.00 | 11.25 |
| 9 | ವ್ಯವಸಾಯ ಸೇವಾ ಸಹಕಾರ ಸಂಘ, ನಿಯಮಿತ, ಹೊಸಗಾವಿ, ಮದ್ದೂರು ತಾಲ್ಲೂಕು | ಕಟ್ಟಡ ವಿಸ್ತರಣೆ | 05.00 | 3.75 |

| 1 | 2 | 3 | 4 | 5 |
|---|---|---|---|---|
| 10 | ಪ್ರಾ.ಕೃ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ), ಇಂಡಿ ತಾಲ್ಲೂಕು | ಕಟ್ಟಡ ದುರಸ್ತಿ | 10.00 | 7.50 |
| 11 | ಕೃ. ಪತ್ತಿನ ಸಹಕಾರ ಸಂಘ, ಕ್ಯಾಲಗಂಡ ಶಿಗ್ಗಾಂವ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 12 | ಕೃ. ಪತ್ತಿನ ಸಹಕಾರ ಸಂಘ, ಶಿಶುವಿನಾಳ, ಶಿಗ್ಗಾಂವ ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 3.75 |
| 13 | ಕೃ. ಪತ್ತಿನ ಸಹಕಾರ ಸಂಘ, ಹಿರೇಬಂಡಿಗೇರಿ, ಶಿಗ್ಗಾಂವ ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 3.75 |
| 14 | ಟಿಎಪಿಸಿಎಂಎಸ್, ಶ್ರೀರಂಗಪಟ್ಟಣ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 15 | ಪಿಎಲ್‌ಡಿ ಬ್ಯಾಂಕ್, ಚಾಮರಾಜನಗರ ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 3.75 |
| 16 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ನಲ್ಲಿತಾಳ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 17 | ಪ್ರಾ. ಕೃ. ಪತ್ತಿನ ಸಹಕಾರ ಸಂಘ, ತೆಕ್ಕೂರು, ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 18 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಬೇಗಾರು, ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 19 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಹೊಂಗನೂರು, ಚಾಮರಾಜನಗರ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 20 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಯಾಚೇನಹಳ್ಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ. | ಕಟ್ಟಡ ನಿರ್ಮಾಣ | 20.00 | 15.00 |
| 21 | ಟಿಎಪಿಸಿಎಂಎಸ್, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ. | ಕಟ್ಟಡ ನಿರ್ಮಾಣ | 22.00 | 16.50 |
| 22 | ಟಿಎಪಿಸಿಎಂಎಸ್, ಕೊಳ್ಳೆಗಾಲ, ಚಾಮರಾಜನಗರ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 23 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಹಿರೇಮಾಗನೂರು, ರಾಣೆಬೆನ್ನೂರು ತಾಲ್ಲೂಕು ಇದರ ಸುವರ್ಣ ಸಹಕಾರ ಸೌಧ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 20.00 | 15.00 |
| 24 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಅಗಡಿ, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ ಮತ್ತು ದುರಸ್ತಿ | 10.00 | 7.50 |
| 25 | ಶ್ರೀ ಬಸವೇಶ್ವರ ಹಾಲಸಿದ್ದನಾಥ ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕೊಥಳಿ, ಚಿಕ್ಕೋಡಿ ತಾಲ್ಲೂಕು | ಕಟ್ಟಡ ದುರಸ್ತಿ | 08.30 | 6.225 |
| 26 | ಶ್ರೀ ಬಸವೇಶ್ವರ ಪ್ರಾ.ಕೃ. ಪತ್ತಿನ ಸಹಕಾರ ಸಂಘ, ನಿ., ಯಕ್ಸಂಬಾ ತಾಲ್ಲೂಕು, ಚಿಕ್ಕೋಡಿ ತಾಲ್ಲೂಕು | ಕಟ್ಟಡ ದುರಸ್ತಿ | 07.30 | 5.475 |
| 27 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ದೊಡ್ಡರಸಿನಕೆರೆ, ಮದ್ದೂರು ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 28 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಸಬ್ಬನಹಳ್ಳಿ, ಮದ್ದೂರು ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 7.50 |
| 29 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಸಿಂಗರಾಜನಪುರ, ಚನ್ನಪಟ್ಟಣ ತಾಲ್ಲೂಕು | ಕಟ್ಟಡ ನಿರ್ಮಾಣ ಮತ್ತು ದುರಸ್ತಿ | 10.00 | 7.50 |
| 30 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಸಿರವಾಸೆ, ಚಿಕ್ಕಮಗಳೂರು | ಕಟ್ಟಡ ದುರಸ್ತಿ | 05.00 | 3.75 |
| 31 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಹೊನ್ನರಗಿ, ಚಿಕ್ಕೋಡಿ ತಾಲ್ಲೂಕು, | ಕಟ್ಟಡ ದುರಸ್ತಿ | 05.40 | 4.05 |
| 32 | ಬಸವನಗುಡಿ ಸಹಕಾರ ಸಂಘ, ಬೆಂಗಳೂರು ಇದರ ಶತಮಾನೋತ್ಸವ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 20.00 | 15.00 |
| 33 | ಟಿಎಪಿಸಿಎಂಎಸ್, ಚಳ್ಳಕೆರೆ ತಾ., ಚಿತ್ರದುರ್ಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 34 | ಕಾವೇರಿ ಮಹಿಳಾ ವಿವಿಧ ಉದ್ದೇಶಗಳ ಸಹಕಾರಿ ಸಂಘ ನಿಯಮಿತ, ಅಥನಿ, ಬೆಳಗಾವಿ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 3.75 |
| 35 | ಪಿಎಲ್‌ಡಿ ಬ್ಯಾಂಕ್, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ | ದುರಸ್ತಿ ಹಾಗೂ ಮೇಲ್ಛಾವಣಿ ಅಳವಡಿಕೆಯ ಕಾಮಗಾರಿಗಾಗಿ | 08.00 | 6.00 |
| 36 | ಕುದೇರು ಪ್ರಾ.ಕೃ.ಪತ್ತಿನ ಸಹಕಾರ ಸಂಘ ಕುದೇರು, ಚಾಮರಾಜನಗರ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |

| 1 | 2 | 3 | 4 | 5 |
|---|---|---|---|---|
| 37 | ಪಿ.ಸಿ.ಎ.ಆರ್.ಡಿ. ಬ್ಯಾಂಕ್, ಮುಳಬಾಗಿಲು, ಕೋಲಾರ ಜಿಲ್ಲೆ ಇದರ ಮೇಲಂತಸ್ತಿನ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 | 7.50 |
| 38 | ಹಳಿಯಾಳ ತಾಲ್ಲೂಕಾ ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ನಿ., ಹಳಿಯಾಳ | ಕಟ್ಟಡ ದುರಸ್ತಿ | 10.00 | 7.50 |
| 39 | ಅಕ್ಕಮಹಾದೇವಿ ಮಹಿಳಾ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ನಿ., ಅಥಣಿ, ಬೆಳಗಾವಿ ಜಿಲ್ಲೆ. | ಕಟ್ಟಡ ನಿರ್ಮಾಣ | 05.00 | 3.75 |
| 40 | ಶ್ರೀ ಬಸವೇಶ್ವರ ಪ್ರಾ.ಕೃ.ಪತ್ತಿನ ಸಹಕಾರ ಸಂಘ, ನಿ, ಸದಲಗ, ಚಿಕ್ಕೋಡಿ ತಾ. | ಕಟ್ಟಡ ನಿರ್ಮಾಣ | 10.00 | 7.50 |
| 41 | ರೋಣಾ ಪಿಎಲ್‌ಡಿ ಬ್ಯಾಂಕ್ | ಕಟ್ಟಡ ನಿರ್ಮಾಣ | 05.00 | 3.75 |
| 42 | ದೊಡ್ಡ ಪ್ರಮಾಣದ ಪತ್ತಿನ ಸಹಕಾರ ಸಂಘ, ರೋಣ | ಕಟ್ಟಡ ನಿರ್ಮಾಣ | 05.00 | 3.75 |
| 43 | ಪ್ರಾ.ಕೃ. ಪತ್ತಿನ ಸಹಕಾರಿ ಸಂಘ ನಿ, ಬೆಳಹೋಡ, ಗದಗ ತಾ.. ಗದಗ ಜಿಲ್ಲೆ | ಕಟ್ಟಡ ದುರಸ್ತಿ | 05.00 | 3.75 |
| 44 | ನಾರ್ವೆ ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಾರ್ವೆ, ಅರೇಹಳ್ಳಿ ಹೋಬಳಿ, ಬೇಲೂರು ತಾ., ಹಾಸನ ಜಿಲ್ಲೆ. | ಕಟ್ಟಡ ನಿರ್ಮಾಣ | 10.00 | 7.50 |
| 45 | ಪ್ರಾ.ಕೃ. ಪತ್ತಿನ ಸಹಕಾರಿ ಸಂಘ ನಿ., ಉಕ್ಕುಂದ, ಬ್ಯಾಡಗಿ ತಾ., ಹಾವೇರಿ ಜಿಲ್ಲೆ. | ಕಟ್ಟಡ ದುರಸ್ತಿ | 05.00 | 3.75 |
| 46 | ಪ್ರಾ. ಕೃ. ಪತ್ತಿನ ಸಹಕಾರ ಸಂಘ, ನಿ., ಹಳೇಬೀಡು, ಬೇಲೂರು ತಾ., ಹಾಸನ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 3.75 |
| 47 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ದೊಡ್ಡಮೇಟಿಕುರ್ಕೆ, ಅರಸೀಕೆರೆ ತಾ., ಹಾಸನ ಜಿಲ್ಲೆ ಇದರ ಗೋದಾಮು ನಿರ್ಮಾಣ | ಕಟ್ಟಡ ನಿರ್ಮಾಣ | 05.00 | 3.75 |
| 48 | ಪ್ರಾ.ಕೃ. ಪತ್ತಿನ ಸಹಕಾರಿ ಸಂಘ ನಿ., ಹಿಟ್ಟಿನಹಳ್ಳಿ ಎಲ್. ಟಿ. ಸಿಂದಗಿ ತಾ., ಬಿಜಾಪುರ ಜಿಲ್ಲೆ | ಕಟ್ಟಡ ನಿರ್ಮಾಣ | 04.00 | 3.00 |
| 49 | ಯಳಂದೂರು ಟಿ.ಎ.ಪಿ.ಸಿ.ಎಂ.ಎಸ್. ಕಟ್ಟಡ ಕಾಮಗಾರಿಗಳು | ಕಟ್ಟಡ ನಿರ್ಮಾಣ | 10.00 | 7.50 |
| 50 | ವ್ಯವಸಾಯ ಸೇವಾ ಸಹಕಾರ ಸಂಘ, ಕುಡದರಹಾಳು, ಶಿಗುಪ್ಪ ತಾ., ಬಳ್ಳಾರಿ ಜಿಲ್ಲೆ | ಕಟ್ಟಡ ದುರಸ್ತಿ | 05.00 | 3.75 |
| 51 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ತಂಬ್ರಹಳ್ಳಿ, ಹಗರಿಬೊಮ್ಮನಹಳ್ಳಿ ತಾ. | ಕಟ್ಟಡ ನಿರ್ಮಾಣ | 15.00 | 11.25 |
| 52 | ಪಿಕಾರ್ಡ್ ಬ್ಯಾಂಕ್, ಹಿರೇಕೆರೂರು, ಹಾವೇರಿ ಜಿಲ್ಲೆ ಇದರ ಸಭಾಂಗಣ ನಿರ್ಮಾಣ | ಕಟ್ಟಡ ನಿರ್ಮಾಣ | 05.00 | 3.75 |
| 53 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಅಜ್ಜಂಪುರ, ತರೀಕೆರೆ ತಾ., ಚಿಕ್ಕಮಗಳೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 54 | ಪ್ರಾ.ಕೃ.ಪತ್ತಿನ ಸಹಕಾರ ಸಂಘ ನಿ, ಶಿವಪುರ, ಮಂಡ್ಯ ತಾ., | ಕಟ್ಟಡ ದುರಸ್ತಿ | 05.00 | 3.75 |
| 55 | ಪ್ರಾ.ಕೃ.ಪತ್ತಿನ ಸಹಕಾರಿ ಸಂಘ ನಿ., ಅಣ್ಣೂರು. ಹೆಚ್.ಡಿ. ಕೋಟೆ ತಾ., ಮೈಸೂರು ಜಿಲ್ಲೆ ಇದರ ರೈತ ಭವನ ನಿರ್ಮಾಣ | ಕಟ್ಟಡ ನಿರ್ಮಾಣ | 05.00 | 3.75 |
| 56 | ಪಾ.ಕೃ. ಪತ್ತಿನ ಸಹಕಾರಿ ಸಂಘ, ಹಾವಡಿ, ಶೃಂಗೇರಿ ತಾ. | ಕಟ್ಟಡ ನಿರ್ಮಾಣ | 10.00 | 7.50 |
| 57 | ಕ್ರೀಡಾ ಉತ್ತೇಜನ ಹಾಗೂ ಅಭಿವೃದ್ಧಿ ಸಹಕಾರ ಸಂಘ ನಿ., ಚಂದ್ರಗಿ, ರಾಮದುರ್ಗ ತಾ., ಬೆಳಗಾವಿ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 58 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕಿತ್ತೂರು, ಪಿರಿಯಾಪಟ್ಟಣ ತಾಲ್ಲೂಕು ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 59 | ಪ್ರಾ.ಸ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ಹೊಸಪೇಟೆ, ಬಳ್ಳಾರಿ ಜಿಲ್ಲೆ ಇದರ ರೈತ ತರಬೇತಿ ಕಟ್ಟಡಕ್ಕೆ | ಕಟ್ಟಡ ನಿರ್ಮಾಣ | 05.00 | 3.75 |
| 60 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಹಿರೇಮಗಳೂರು, ಚಿಕ್ಕಮಗಳೂರು ಜಿಲ್ಲೆ ಇದರ ಶಾಖೆ ಕುರುಂವಂಗಿ ಗ್ರಾಮ ಇಲ್ಲಿ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 | 7.50 |
| 61 | ಪ್ರಾ.ಕೃ.ಪ.ಸ.ಸಂ. ಸೋಮಹಳ್ಳಿ, ಗುಂಡ್ಲುಪೇಟೆ, ತಾ: ಹಾಲಹಳ್ಳಿ | ಕಟ್ಟಡ ನಿರ್ಮಾಣ | 20.00 | 15.00 |

| 1 | 2 | 3 | 4 | 5 |
|---|---|---|---|---|
| 62 | ಪಿ.ಕೆ.ಪಿ.ಎಸ್. ಉಗರಗೋಳ, ತಾ: ಸವದತ್ತಿ, ಬೆಳಗಾವಿ | ಕಟ್ಟಡ ನಿರ್ಮಾಣ | 10.00 | 7.50 |
| 63 | ಟಿಎಪಿಸಿಎಂಎಸ್, ಚಿಕ್ಕಬಳ್ಳಾಪುರ | ಕಟ್ಟಡ ನಿರ್ಮಾಣ | 10.00 | 7.50 |
| 64 | ಪ್ರಾ.ಕೃ.ಪ.ಸ.ಸಂ. ಬೈರಂಬಾಡಿ, ಗುಂಡ್ಲುಪೇಟೆ ತಾ | ಕಟ್ಟಡ ನಿರ್ಮಾಣ | 10.00 | 7.50 |
| 65 | ಜಗಳೂರು ತಾ. ಸಹಕಾರ ಮತ್ತು ಕೃಷಿ ಅಭಿವೃದ್ಧಿ ಬ್ಯಾಂಕ್ ದಾವಣಗೆರೆ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 66 | ಪಿಎಲ್‌ಡಿ ಬ್ಯಾಂಕ್ , ಹೊಸಕೋಟೆ ತಾ | ಕಟ್ಟಡ ನಿರ್ಮಾಣ | 10.00 | 7.50 |
| 67 | ಹೊನ್ನಾವರ ತಾಲ್ಲೂಕಿನ ಹೊನ್ನಾವರ ಜೇನು ಸಾಕುವವರ ಮತ್ತು ಗ್ರಾಮೀಣ ಕೈಗಾರಿಕಾ ಸಹಕಾರ ಸಂಘ ನಿ, | ಕಟ್ಟಡ ನವೀಕರಣ | 14.00 | 10.50 |
| 68 | ಪಾ.ಕೃ. ಪತ್ತಿನ ಸಹಕಾರಿ ಸಂಘ ನಿ., ಬೋರಗಿ, ಸಿಂದಗಿ ತಾ.. ವಿಜಾಪುರ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 3.75 |
| 69 | ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹೊಸನಗರ, ಶಿವಮೊಗ್ಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 7.50 |
| 70 | ವಿಎಸ್‌ಎಸ್‌ಎನ್, ಕೊಡ್ಲಿಪೇಟೆ, ಸೋಮವಾರಪೇಟೆ ತಾ. | ಕಟ್ಟಡ ನವೀಕರಣ | 08.00 | 6.00 |
| 71 | ವಿಎಸ್‌ಎಸ್‌ಎನ್, ಬನ್ನಿಕಲ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | ಕಟ್ಟಡ ದುರಸ್ತಿ | 02.00 | 1.50 |
| 72 | ಟಿಎಪಿಸಿಎಂಎಸ್, ಹೊಸಕೋಟೆ | ಕಟ್ಟಡ ದುರಸ್ತಿ | 05.00 | 3.75 |
| 73 | ಪ್ರಾ.ಸ.ಸಂ. ಜಡಿಗೇನಹಳ್ಳಿ, ಹೊಸಕೋಟೆ ತಾ. | ಕಟ್ಟಡ ದುರಸ್ತಿ | 05.00 | 3.75 |
| 74 | ಪಿಎಲ್‌ಡಿ ಬ್ಯಾಂಕ್, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ | ಕಟ್ಟಡ ನಿರ್ಮಾಣ | 12.00 | 9.00 |
| 75 | ಟಿಎಪಿಸಿಎಂಎಸ್, ಕೆ.ಆರ್. ನಗರ, ಮೈಸೂರು | ಕಟ್ಟಡ ದುರಸ್ತಿ | 05.00 | 3.75 |
| | **ಒಟ್ಟು ಮೊತ್ತ** | | **700.00** | **525.00** |

**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

**ಅನುಬಂಧ–2**

ಸರ್ಕಾರದ ಆದೇಶ ಸಂಖ್ಯೆ: ಸಿಓ 212 ಸಿಎಲ್‌ಎಸ್ 2013, ದಿನಾಂಕ: 05.02.2016.

ರೂ. ಲಕ್ಷಗಳಲ್ಲಿ

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | ಉದ್ದೇಶ | ಅಂದಾಜು ಮೊತ್ತ | ಹಿಂದೆ ಬಿಡುಗಡೆ ಮಾಡಲಾದ ಮೊತ್ತ | ಇದೀಗ ಬಿಡುಗಡೆ ಮಾಡಲಾದ ಮೊತ್ತ |
|---|---|---|---|---|---|
| 1 | 2 | 3 | 4 | 5 | 6 |
| 1 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ತಾವರೆಕೆರೆ, ಶಿರಾ ತಾ; | ಗೋದಾಮು ದುರಸ್ತಿ | 05.00 | 2.50 | 2.50 |
| 2 | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಮಂಟೂರ ಹುಬ್ಬಳ್ಳಿ | ಕಟ್ಟಡ ದುರಸ್ತಿ | 05.00 | 2.50 | 2.50 |
| 3 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಕುಸುಗಲ್ ಹುಬ್ಬಳ್ಳಿ | ಕಟ್ಟಡ ದುರಸ್ತಿ | 04.00 | 2.00 | 2.00 |
| 4 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೃಷ್ಣಪುರ ಹುಬ್ಬಳ್ಳಿ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 5 | ಕೃಷಿ ಪತ್ತಿನ ಸಹಕಾರ ಬ್ಯಾಂಕ್, ಶಿರೂರ, ಬಾಗಲಕೋಟೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 6 | ಕೃಷಿ ಪತ್ತಿನ ಸಹಕಾರ ಬ್ಯಾಂಕ್, ತಿಮ್ಮಾಪುರ, ಬಾಗಲಕೋಟೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 7 | ಕೃಷಿ ಪತ್ತಿನ ಸಹಕಾರ ಸಂಘ, ಬಿನ್ನಿಕಟ್ಟಿ, ಬ್ಯಾಡಗಿ ತಾ: | ಕಟ್ಟಡ ನಿರ್ಮಾಣ | 05.00 | 2.50 | 2.50 |
| 8 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಂಗೂರು, ಬ್ಯಾಡಗಿ ಕ್ಷೇತ್ರ ಹಾವೇರಿ ತಾ: | ಕಟ್ಟಡ ನಿರ್ಮಾಣ | 05.00 | 2.50 | 2.50 |
| 9 | ಕೃಷಿ ಪತ್ತಿನ ಸಹಕಾರ ಸಂಘ, ಅರಳೇಶ್ವರ, ಹಾನಗಲ್ ತಾ:, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |

| 1 | 2 | 3 | 4 | 5 | 6 |
|---|---|---|---|---|---|
| 10 | ಕೃಷಿ ಪತ್ತಿನ ಸಹಕಾರ ಸಂಘ, ಮೋಟೆ ಬೆನ್ನೂರು, ಬ್ಯಾಡಗಿ ಕ್ಷೇತ್ರ, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 11 | ಕೃಷಿ ಪತ್ತಿನ ಸಹಕಾರ ಸಂಘ, ಯಲಗಚ್ಚ, ಹಾವೇರಿ | ಕಟ್ಟಡ ದುರಸ್ತಿ | 02.00 | 1.00 | 1.00 |
| 12 | ಕೃಷಿ ಪತ್ತಿನ ಸಹಕಾರ ಸಂಘ, ನೆಗಳೂರು, ಹಾವೇರಿ | ಕಟ್ಟಡ ದುರಸ್ತಿ | 02.00 | 1.00 | 1.00 |
| 13 | ಕೃಷಿ ಪತ್ತಿನ ಸಹಕಾರ ಸಂಘ, ಕಲ್ಲಿಹಾಳ ಹಾವೇರಿ | ಕಟ್ಟಡ ದುರಸ್ತಿ | 02.00 | 1.00 | 1.00 |
| 14 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಾವಣಗಿ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 15 | ಟೌನ್ ಬಳಕೆದಾರರ ವಿವಿದೋದ್ದೇಶ ಸಹಕಾರ ಸಂಘ, ನಿ., ಹುಣಸೂರು ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 16 | ಆರ್‌ಎಸ್‌ಎಸ್‌ಎನ್ ಗಾವಡಗೆರೆ, ಹುಣಸೂರು ತಾ: | ಕಟ್ಟಡ ನಿರ್ಮಾಣ | 10.00 | 5.00 | 5.00 |
| 17 | ವಿಎಸ್‌ಎಸ್‌ಎನ್ ರತ್ನಪುರ, ಹುಣಸೂರು ತಾ: | ಕಟ್ಟಡ ನಿರ್ಮಾಣ | 05.00 | 2.50 | 2.50 |
| 18 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗರಗೇಶ್ವರಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 15.00 | 7.50 | 7.50 |
| 19 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಟ್ಟದಪುರ, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 20 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೆಡಿಯಾಲ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 21 | ವಿಎಸ್‌ಎಸ್‌ಎನ್, ಸಾಲಿಗ್ರಾಮ, ಕೆ.ಆರ್.ನಗರ ತಾಲ್ಲೂಕು | ಕಟ್ಟಡ ದುರಸ್ತಿ | 05.00 | 2.50 | 2.50 |
| 22 | ವಿಎಸ್ ಎಸ್ ಎನ್ ಹೊಸೂರು, ಚುಂಚನಕಟ್ಟೆ ಹೋಬಳಿ, ಕೆ. ಆರ್. ನಗರ | ಕಟ್ಟಡ ದುರಸ್ತಿ | 05.00 | 2.50 | 2.50 |
| 23 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಟ್ಟದತುಂಗ, ಪಿರಿಯಾಪಟ್ಟಣ ತಾ: | ಕಟ್ಟಡ ನಿರ್ಮಾಣ | 10.00 | 5.00 | 5.00 |
| 24 | ಪಿಎಲ್‌ಡಿ ಬ್ಯಾಂಕ್, ಹೆಚ್.ಡಿ.ಕೋಟೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 25 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಶೆಟ್ಟಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು. | ಕಟ್ಟಡ ನಿರ್ಮಾಣ | 08.00 | 4.00 | 4.00 |
| 26 | ಕಸಬಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗುಂಡ್ಲುಪೇಟೆ ಟೌನ್ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 27 | ಪಿಎಲ್‌ಡಿ ಬ್ಯಾಂಕ್, ಗುಂಡ್ಲುಪೇಟೆ ತಾ: | ಕಟ್ಟಡ ನಿರ್ಮಾಣ | 10.00 | 5.00 | 5.00 |
| 28 | ಟಿಎಪಿಸಿಎಂಎಸ್, ಚಿಕ್ಕಮಗಳೂರು | ಗೋದಾಮು ನಿರ್ಮಾಣ | 10.00 | 5.00 | 5.00 |
| 29 | ಟಿಎಪಿಸಿಎಂಎಸ್, ಸಕಲೇಶಪುರ, ಹಾಸನ ಜಿಲ್ಲೆ, | ರೈತ ಭವನ ನಿರ್ಮಾಣ | 10.00 | 5.00 | 5.00 |
| 30 | ಕೃಷಿ ಪತ್ತಿನ ಸಹಕಾರ ಸಂಘ, ಉಳುವಾಗಿಲು, ಚಿಕ್ಕಮಗಳೂರು ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 5.00 | 5.00 |
| 31 | ಕೃಷಿ ಪತ್ತಿನ ಸಹಕಾರ ಸಂಘ, ಕಡವಂತೆ, ಶೃಂಗೇರಿ ತಾ: ಚಿಕ್ಕಮಗಳೂರು ಜಿಲ್ಲೆ | ಕಟ್ಟಡ ನಿರ್ಮಾಣ | 06.00 | 3.00 | 3.00 |
| 32 | ಮಲ್ಲಿಪಟ್ಟಣ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಲ್ಲಿಪಟ್ಟಣ, ಅರಕಲಗೂಡು ತಾ., ಹಾಸನ ಜಿಲ್ಲೆ. | ಕಟ್ಟಡ ನಿರ್ಮಾಣ | 10.00 | 5.00 | 5.00 |
| 33 | ದೊಡ್ಡಕೋಡಿಹಳ್ಳಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಳೇಬೀಡು ಹೋಬಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ. | ಕಟ್ಟಡ ನಿರ್ಮಾಣ | 05.00 | 2.50 | 2.50 |

| 1 | 2 | 3 | 4 | 5 | 6 |
|---|---|---|---|---|---|
| 34 | ಕೃಷಿ ಪತ್ತಿನ ಸಹಕಾರ ಸಂಘ, ಕುಡ್ಲೂರು, ತರೀಕೆರೆ ತಾ: ಚಿಕ್ಕಮಗಳೂರು ಜಿಲ್ಲೆ. | ಗೋದಾಮು ನಿರ್ಮಾಣ | 10.00 | 5.00 | 5.00 |
| 35 | ಕಾಫೀ ಕೋ–ಆಪರೇಟಿವ್ ಸೊಸೈಟಿ, ಅರೇಹಳ್ಳಿ ಗ್ರಾಮ, ಬೇಲೂರು ತಾ: | ಕಟ್ಟಡ ನಿರ್ಮಾಣ | 08.00 | 4.00 | 4.00 |
| 36 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹರಿಯಬ್ಬೆ, ಹಿರಿಯೂರು ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 2.50 | 2.50 |
| 37 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೂವಿನಹೊಳೆ, ಹಿರಿಯೂರು ತಾಲ್ಲೂಕು | ಕಟ್ಟಡ ನಿರ್ಮಾಣ | 05.00 | 2.50 | 2.50 |
| 38 | ವಿಎಸ್ಎಸ್ಎನ್, ಕಡಬನಕಟ್ಟೆ, ಚಳ್ಳಕೆರೆ ತಾ: ಚಿತ್ರದುರ್ಗ ಜಿಲ್ಲೆ. | ಕಟ್ಟಡ ನಿರ್ಮಾಣ | 05.00 | 2.50 | 2.50 |
| 39 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಡಿ. ಕೊತ್ತಪಲ್ಲಿ, ಬಾಗೇಪಲ್ಲಿ ತಾ., ಕೋಲಾರ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 40 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೆಸ್ತೂರು, ಮದ್ದೂರು ತಾ., | ಕಟ್ಟಡ ನಿರ್ಮಾಣ | 10.00 | 5.00 | 5.00 |
| 41 | ಕೃಷಿ ಪತ್ತಿನ ಸಹಕಾರ ಸಂಘ, ಅರಕೆರೆ, ಶ್ರೀರಂಗಪಟ್ಟಣ ತಾ., | ಕಟ್ಟಡ ನಿರ್ಮಾಣ | 10.00 | 5.00 | 5.00 |
| 42 | ಕೃಷಿ ಪತ್ತಿನ ಸಹಕಾರ ಸಂಘ, ಶೆಟ್ಟಹಳ್ಳಿ, ಮಳವಳ್ಳಿ ತಾ., ಮಂಡ್ಯ ಜಿಲ್ಲೆ. | ಕಟ್ಟಡ ನಿರ್ಮಾಣ | 10.00 | 5.00 | 5.00 |
| 43 | ಕೃಷಿ ಪತ್ತಿನ ಸಹಕಾರ ಸಂಘ, ಕೌಡ್ಲೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. | ಮುಂದುವರಿದ ಕಾಮಗಾರಿ | 05.00 | 2.50 | 2.50 |
| 44 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಸೂರು, ಸೋಮವಾರ ಪೇಠೆ ತಾ. ಕೊಡಗು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 45 | ಹುನಗುಂದ ತಾ: ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ | ಕಟ್ಟಡ ದುರಸ್ತಿ | 10.00 | 5.00 | 5.00 |
| 46 | ಕೃಷಿ ಪತ್ತಿನ ಸಹಕಾರ ಸಂಘ, ದನ್ನೂರು, ಹುನಗುಂದ ತಾಲ್ಲೂಕು | ಕಟ್ಟಡ ನಿರ್ಮಾಣ | 08.00 | 4.00 | 4.00 |
| 47 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಾರಿಗನೂರು ಚನ್ನಗಿರಿ ತಾ: | ಕಟ್ಟಡ ನಿರ್ಮಾಣ | 10.00 | 5.00 | 5.00 |
| 48 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ., ಕಲ್ಲೋಳಿ, ಚಿಕ್ಕೋಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 5.00 | 5.00 |
| 49 | ವ್ಯವಸಾಯ ಸೇವಾ ಸಹಕಾರ ಸಂಘ, ಸಾ: ಬನ್ನೂರ, ಬಿಕೆಪಿಎಸ್, ತಾ: ರಾಮದುರ್ಗ, ಬೆಳಗಾವಿ ಜಿಲ್ಲೆ | ಕಟ್ಟಡ ನಿರ್ಮಾಣ | 07.00 | 3.50 | 3.50 |
| 50 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಾ: ಸುನ್ನಾಳ, ತಾ: ರಾಮದುರ್ಗ, ಬೆಳಗಾವಿ ಜಿಲ್ಲೆ | ಕಟ್ಟಡ ದುರಸ್ತಿ, ಕಾಂಪೌಂಡ್ ನಿರ್ಮಾಣ | 07.00 | 3.50 | 3.50 |
| 51 | ಕೃಷಿ ಪತ್ತಿನ ಸಹಕಾರ ಸಂಘ, ಹದನಾಳ ನಿಪ್ಪಾಣಿ ಮತ ಕ್ಷೇತ್ರ, ಬೆಳಗಾವಿ | ಕಟ್ಟಡ ದುರಸ್ತಿ | 06.00 | 3.00 | 3.00 |
| 52 | ಶ್ರೀ ಜೈ ಹನುಮಾನ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ಹಣಬರವಾಡಿ, ತಾ: ಚಿಕ್ಕೋಡಿ, ಜಿ: ಬೆಳಗಾವಿ | ಕಟ್ಟಡ ದುರಸ್ತಿ | 05.00 | 2.50 | 2.50 |
| 53 | ಕೃಷಿ ಪತ್ತಿನ ಸಹಕಾರ ಸಂಘ, ಕೆರೆಹಳ್ಳಿ, ಚಾಮರಾಜನಗರ ತಾ: & ಜಿಲ್ಲೆ. | ಕಟ್ಟಡ ನಿರ್ಮಾಣ | 05.00 | 2.50 | 2.50 |
| 54 | ಪಿಎಲ್‌ಡಿ ಬ್ಯಾಂಕ್, ಶ್ರೀನಿವಾಸಪುರ, ಕೋಲಾರ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 55 | ಟಿಎಪಿಸಿಎಂಎಸ್, ಮುಂಡರಗಿ, ಗದಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 | 5.00 |

| 1 | 2 | 3 | 4 | 5 | 6 |
|---|---|---|---|---|---|
| 56 | ಕೃಷಿ ಪತ್ತಿನ ಸಹಕಾರ ಸಂಘ, ಅಂತೂರು, ಗದಗ ತಾ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 57 | ಕೃಷಿ ಪತ್ತಿನ ಸಹಕಾರ ಸಂಘ, ಕಣವಿ, ಗದಗ ತಾ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 58 | ಕೃಷಿ ಪತ್ತಿನ ಸಹಕಾರ ಸಂಘ, ನೀಲಗುಂದ, ಗದಗ | ಮೂಲ ಸೌಕರ್ಯ | 05.00 | 2.50 | 2.50 |
| 59 | ಪಿಎಲ್‌ಡಿ ಬ್ಯಾಂಕ್, ಚಿತ್ರದುರ್ಗ | ಕಟ್ಟಡ ದುರಸ್ತಿ | 10.00 | 5.00 | 5.00 |
| 60 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ತಾವರಗೇರಾ, ಕುಷ್ಟಗಿ ತಾ: | ಗೋಡಾನ್ ದುರಸ್ತಿ ಮತ್ತು ಕಟ್ಟಡ ದುರಸ್ತಿ (ಹೆಚ್ಚುವರಿಯಾಗಿ ಒದಗಿಸಲಾಗಿರುವ ಅನುದಾನ) | 10.00 | 5.00 | 5.00 |
| 61 | ಕೃಷಿ ಪತ್ತಿನ ಸಹಕಾರ ಸಂಘ, ಜಾವೂರು ನವಲಗುಂದ, ಧಾರವಾಡ ಜಿಲ್ಲೆ | ಕಟ್ಟಡ ನಿರ್ಮಾಣ | 15.00 | 7.50 | 7.50 |
| 62 | ಕೃಷಿ ಪತ್ತಿನ ಸಹಕಾರ ಸಂಘ, ಬ್ಯಾಹಟ್ಟಿ, ಹುಬ್ಬಳ್ಳಿ | ಕಟ್ಟಡ ದುರಸ್ತಿ | 07.00 | 3.50 | 3.50 |
| 63 | ಹುಬ್ಬಳ್ಳಿ ತಾ: ಗೋಕುಲ ಅಗಡಿ ಗ್ರಾಮದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, | ಕಟ್ಟಡ ದುರಸ್ತಿ | 05.00 | 2.50 | 2.50 |
| 64 | ಹಾವೇರಿ ಜಿಲ್ಲಾ ಕೋ ಅಪ್ ಕಂಜುಮರ್ಸ್ ಹೋಲ್‌ಸೇಲ್ ಸ್ಟೋರ್ಸ್ ನಿ, ಹಿರೇಕೆರೂರು | ಉಗ್ರಾಣ ನಿರ್ಮಾಣ | 07.00 | 3.50 | 3.50 |
| 65 | ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ, ಅಫಜಲಪುರ | ಕಟ್ಟಡ ದುರಸ್ತಿ | 10.00 | 5.00 | 5.00 |
| 66 | ಟಿಎಪಿಸಿಎಂಎಸ್ ರಥಬೀದಿ, ಸುಳ್ಯ | ಗೋದಾಮು ನಿರ್ಮಾಣ | 10.00 | 5.00 | 5.00 |
| 67 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇಡಗುಂದಿ, ಯಲ್ಲಾಪುರ ತಾ: | ಕಟ್ಟಡ ನಿರ್ಮಾಣ | 10.00 | 5.00 | 5.00 |
| 68 | ಕೃಷಿ ಪತ್ತಿನ ಸಹಕಾರ ಸಂಘ, ಹಂಗರಗಿ, ಬಾದಾಮಿ ತಾ., | ಕಟ್ಟಡ ನಿರ್ಮಾಣ | 10.00 | 5.00 | 5.00 |
| 69 | ವಿಎಸ್‌ಎಸ್‌ಎನ್, ಬೆನ್ನಾಯಕನಹಳ್ಳಿ, ತಿಪಟೂರು ತಾ; | ಕಟ್ಟಡ ದುರಸ್ತಿ | 05.00 | 2.50 | 2.50 |
| 70 | ವಿಎಸ್‌ಎಸ್‌ಎನ್, ವೆಂಕಟಾಪುರ, ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 71 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಸೂರ, ಹಿರೇಕೆರೂರು. | ಕಟ್ಟಡ ನಿರ್ಮಾಣ | 05.00 | 2.50 | 2.50 |
| 72 | ಕೃಷಿ ಪತ್ತಿನ ಸಹಕಾರ ಸಂಘ, ಛಬ್ಬಿ, ಹುಬ್ಬಳ್ಳಿ | ಗೋದಾಮು ದುರಸ್ತಿ | 05.00 | 2.50 | 2.50 |
| 73 | ಕೃಷಿ ಪತ್ತಿನ ಸಹಕಾರ ಸಂಘ, ಅದರಗುಂಜಿ, ಹುಬ್ಬಳ್ಳಿ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 74 | ಶ್ರೀ ಹನುಮಾನ್ ಕೃಷಿ ಪತ್ತಿನ ಸಹಕಾರ ಸಂಘ, ಶಿರಾಂವ್ ವಾಡಿ, ಚಿಕ್ಕೋಡಿ ತಾ: | ಕಟ್ಟಡ ನಿರ್ಮಾಣ | 03.00 | 1.50 | 1.50 |
| 75 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ವಾಳಕ್ಕಿ, ಚಿಕ್ಕೋಡಿ ತಾ., ಬೆಳಗಾಂ ಜಿಲ್ಲೆ. | ಗೋದಾಮು ನಿರ್ಮಾಣ | 03.00 | 1.50 | 1.50 |
| 76 | ಜೈಕಿಸಾನ್ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇಂಗಳಿ, ಚಿಕ್ಕೋಡಿ ತಾ. | ಕಟ್ಟಡ ಹಾಗೂ ಗೋದಾಮು ಕಟ್ಟಡ ನಿರ್ಮಾಣ | 03.00 | 1.50 | 1.50 |
| 77 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನವಿಲಹಾಳ, ಚಿಕ್ಕೋಡಿ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 03.00 | 1.50 | 1.50 |
| 78 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಧುಳಗನವಾಡಿ, ಚಿಕ್ಕೋಡಿ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 03.00 | 1.50 | 1.50 |

| 1 | 2 | 3 | 4 | 5 | 6 |
|---|---|---|---|---|---|
| 79 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ದೊಡ್ಡ ಮರಳವಾಡಿ, ಕನಕಪುರ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 02.00 | 1.00 | 1.00 |
| 80 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೈನಡು, ಹೊಸದುರ್ಗ ತಾ. | ಕಟ್ಟಡ ನಿರ್ಮಾಣ | 05.00 | 2.50 | 2.50 |
| 81 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಚಿಕ್ಕಬ್ಯಾಲದಕೆರೆ, ಹೊಸದುರ್ಗ ತಾ. | ಕಟ್ಟಡ ನಿರ್ಮಾಣ | 05.00 | 2.50 | 2.50 |
| 82 | ಕೃಷಿ ಪತ್ತಿನ ಸಹಕಾರ ಸಂಘ, ತಾಳಕೇರಿ, ಯಲಬುರ್ಗಾ | ಕಟ್ಟಡ ನಿರ್ಮಾಣ | 12.00 | 6.00 | 6.00 |
| 83 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಶಿರಮಾಪುರ, ಹಾವೇರಿ ತಾ: ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 04.00 | 2.00 | 2.00 |
| 84 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಲಗಾರನಹಳ್ಳಿ, ಮದ್ದೂರು ತಾ; | ಕಟ್ಟಡ ದುರಸ್ತಿ | 08.00 | 4.00 | 4.00 |
| 85 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೊಸಗಾವಿ ನಾಗಮಂಗಲ ವಿಧಾನಸಭಾ ಕ್ಷೇತ್ರ | ಕಟ್ಟಡ ನಿರ್ಮಾಣ | 10.00 | 5.00 | 5.00 |
| 86 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಲ್ಲೇಗೆರೆ, ಮಂಡ್ಯ ತಾಲ್ಲೂಕು & ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 87 | ಕೃಷಿ ಪತ್ತಿನ ಸಹಕಾರ ಸಂಘ, ಚಿಪ್ಪಲಕಟ್ಟಿ, ರಾಮದುರ್ಗ ತಾ., ಬೆಳಗಾಂ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 | 2.50 |
| 88 | ಟಿಎಪಿಸಿಎಂಎಸ್, ಮೂಡಿಗೆರೆ ಚಿಕ್ಕಮಗಳೂರು ತಾ: | ಕಟ್ಟಡ ನಿರ್ಮಾಣ | 12.00 | 6.00 | 6.00 |
| 89 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹುನಗುಂದ, ಮುಂಡಗೋಡ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 5.00 | 5.00 |
| 90 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸೊಲ್ಲಾಪುರ, ತರಿಕೆರೆ ತಾ: | ಕಟ್ಟಡ ಮತ್ತು ಗೋದಾಮು ನಿರ್ಮಾಣ | 07.00 | 3.50 | 3.50 |
| 91 | ಪಿಎಲ್‌ಡಿ ಬ್ಯಾಂಕ್, ಮುದ್ದೇಬಿಹಾಳ, | ಕಟ್ಟಡ ನಿರ್ಮಾಣ | 08.00 | 4.00 | 4.00 |
| 92 | ವ್ಯವಸಾಯ ಸೇವಾ ಸಹಕಾರ ಸಂಘ ನಿ., ಬೂದಿಗೆರೆ, ದೇವನಹಳ್ಳಿ ತಾ: ಬೆಂಗಳೂರು ಗ್ರಾಮಾಂತರ | ಕಟ್ಟಡ ನಿರ್ಮಾಣ | 07.00 | 3.50 | 3.50 |
| 93 | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಚಿಕ್ಕಬೆನ್ನೂರು, ಚಿತ್ರದುರ್ಗ ತಾ: | ಕಟ್ಟಡ ದುರಸ್ತಿ | 06.00 | 3.00 | 3.00 |
| 94 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಿರೀಕಾಟಿ, ಗುಂಡ್ಲಪೇಟೆ ತಾ: | ಕಟ್ಟಡ ನಿರ್ಮಾಣ | 07.00 | 3.50 | 3.50 |
| 95 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಾಗಡೆ, ಚಾಮರಾಜನಗರ ತಾ: | ಕಟ್ಟಡ ನಿರ್ಮಾಣ | 08.00 | 4.00 | 4.00 |
| | **ಒಟ್ಟು ಮೊತ್ತ** | | **700.00** | **350.00** | **350.00** |

**P.R.184**

**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

## COMMERCE AND INDUSTRIES SECRETARIAT.

**Subject:** Project Proposal of M/s Kalyani Steels Ltd., for "Expansion of Existing Steel Plant Capacity to 3 MTPA" at Ginigere Village, Koppal Taluk and District-Reg.

**Read:** 1) Proceedings of the 23rd State High Level Clearance Committee (SHLCC) meeting held on 19-06-2010.

2) Government Order No. CI 427 SPI 2010, dated: 19-07-2010.

3) Proceedings of the 36th State High Level Clearance Committee (SHLCC) meeting held on 15-10-2014.

4) Government Order No. CI 427 SPI 2010, dated: 12-12-2014.

5) Proceedings of the 23rd Land Audit Committee (LAC) meeting held on 08-01-2016.

6) Proceedings of the 43rd State High Level Clearance Committee (SHLCC) meeting held on 01-02-2016.

## Preamble:

The project proposal of M/s Kalyani Steels Ltd., for "Expansion of Existing Steel Plant Capacity to 3 MTPA" at Ginigere Village, Koppal Taluk and District with an investment of Rs. 7500 Crores, generating employment to about 4500 persons was approved by the 23rd SHLCC meeting held on 19-06-2010. The Government Order was issued vide Government Order No. CI 427 SPI 2010, dated 19-07-2010 read at (2) above.

Further, 36th SHLCC in its meeting held on 15-10-2014 accorded approval for extension of time to implement the project for futher period of three years from 12-12-2014. Accordingly Government Order No. CI 427 SPI 2010, dated: 12-12-2014 cited at read (4) was issued.

Now, the company has informed that, KIADB could not acquire the land and MOEF refused the proposal due to absence of the land details. Company has further submitted that, due to difficulty in acquisition of land they have decided to implement the project in phases and purchase the land directly from private land owners U/s 109 KLR Act instead of acquisition of land by KIADB. In the first phase the company proposes to implement 1.4 MTPA Steel Plant in about 300 acres of land, The company has entered into agreement with private land owners for about 114 acres 20 guntas of land and submitted agreement copies.

In view of the above, company has requested for approval of the following:

- To implement the project in phases.
- To Change mode of acquisition from KIADB to U/s 109 KLR Act.

The proposal of the company has been placed before the 23rd LAC meeting held on 08-01-2016. The decision of the LAC is as follows:

The representatives of the company explained that, the implementation of the project was delayed due to non acquisition of land and hence they have decided to implement the project in phases by purchasing the land for he project with permission U/s 109 of KLR Act instead of KIADB acquisition.

He had requested the committee to recommend to Revenue Department for grant of permission U/s 109 of KLR to purchase 300 acres of land for the 1st phase of the project.

The committee noted the above and after detailed discussion, resolved to recommend to SHLCC for approval of the above request of the company.

The Proposal was examined in the 43rd State High Leve Clearance Committee (SHLCC) Meeting held on 01-02-2016. Government has examined the recommendations made by the State High Leve Clearance Committee, in all aspects.

Hence the following order.

**GOVERNMENT ORDER No. CI 427 SPI 2010, BENGALURU, DATED: 03-03-2016.**

The Government is pleased to permit M/s Kalyani Steels Ltd., to purchase 300 acres of land U/s 109 of KLR Act for the 1st phase of the project with the consent of farmers.

All other terms and conditions indicated in the Government Order No. CI 427 SPI 2010, dated: 19-07-2010 read at (2) above, remain unaltered

By Order and Name in the Government of the Karnataka

**P.R. 298**
**S.C.25**

**S. Umadevi**
Desk Officer (Technical Cell)
Commerce & Industries Department

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ :** ಶ್ರೀ ಕೆ. ಶಿವಕುಮಾರ್, ರೇಷ್ಮೆ ನಿರೀಕ್ಷಕರು ಇವರು ಕಾಣೆಯಾಗಿದ್ದು, ಇವರ ಕುಟುಂಬಕ್ಕೆ ಕುಟುಂಬ ವೇತನ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1(6): ರೇನಿ: ಕು:ಪಿಂಚಣಿ : 75:2013-14, ದಿನಾಂಕ 31-10-2014 ಮತ್ತು 05-02-2016.

ಪ್ರಸ್ತಾವನೆ :

ಮೇಲೆ ಓದಲಾದ ದಿನಾಂಕ: 31–10–2014ರ ಪತ್ರದಲ್ಲಿ ಶ್ರೀ ಕೆ. ಶಿವಕುಮಾರ್, ರೇಷ್ಮೆ ನಿರೀಕ್ಷಕರು, ತಾಂತ್ರಿಕ ಸೇವಾ ಕೇಂದ್ರ, ಹರವೆ ಇವರು ದಿನಾಂಕ: 04–08–2011 ರಂದು ಕಾಣೆಯಾಗಿರುವುದರಿಂದ ಈ ಬಗ್ಗೆ ನೌಕರರ ಪತ್ನಿಯಾದ ಶ್ರೀಮತಿ ಮಂಜುಳ ಇವರು ಗುಂಡ್ಲುಪೇಟೆ ಪೊಲೀಸ್ ಠಾಣೆ ಇಲ್ಲಿ ಎಫ್.ಐ.ಆರ್. 356/2011, ದಿನಾಂಕ: 03–09–2011 ರಂದು ದೂರು ದಾಖಲಿಸಿರುತ್ತಾರೆ. ಸದರಿಯವರು ಪತ್ತೆಯಾಗದ ಕಾರಣ ಕೇಸನ್ನು ಪತ್ತೆಯಾಗದ ಪ್ರಕರಣವೆಂದು ನಿಶ್ಚಲ ಕಡತದಲ್ಲಿಡಲಾಗಿದೆ ಎಂದು ಕೇಸಿನ ಪ್ರಸ್ತುತ ಹಂತದ ಬಗ್ಗೆ ಸರ್ಕಲ್ ಇನ್ಸ್‌ಪೆಕ್ಟರ್ ಇವರು ಮಾಹಿತಿಯನ್ನು ದಿನಾಂಕ: 13–06–2014ರಂದು ಶ್ರೀಮತಿ ಮಂಜುಳ ಇವರಿಗೆ ನೀಡಿರುತ್ತಾರೆ. ಸದರಿ ಮಾಹಿತಿಯೊಂದಿಗೆ ಕುಟುಂಬದ ಪಡಿತರ ಚೀಟಿ, ಕುಟುಂಬ ಜೀವಿತ ಸದಸ್ಯರ ದೃಢೀಕರಣ ಪತ್ರ ಹಾಗೂ ಇನ್ನಿತರ ದಾಖಲೆಗಳನ್ನು ಒದಗಿಸುತ್ತಾ, ತಮ್ಮ ಪತಿಯು ಒಂದು ವೇಳೆ ಹಿಂದಿರುಗಿ ಬಂದಲ್ಲಿ ಸರ್ಕಾರಕ್ಕೆ ಕ್ಲೇಮು ಸಲ್ಲಿಸಿದ ಸಂದರ್ಭದಲ್ಲಿ ನಾಮನಿರ್ದೇಶಿತಳಾದ ತಾವು ತಮಗೆ ಪಾವತಿ ಮಾಡಿದ ಮೊಬಲಗಳನ್ನು ಹೊಂದಾಣಿಕೆ ಮಾಡಿಕೊಡಲು ವಚನಬದ್ಧಳಾಗಿರುತ್ತೇನೆ ಎಂದು ದೃಢೀಕರಿಸಿದ ವಚನ ಪ್ರಮಾಣ ಪತ್ರವನ್ನು ಸಹ ಸಲ್ಲಿಸಿರುವುದನ್ನು ರೇಷ್ಮೆ ಆಯುಕ್ತರು ಸಲ್ಲಿಸುತ್ತಾ, ಸದರಿ ನೌಕರರ ಕುಟುಂಬದವರಿಗೆ ಕುಟುಂಬ ವೇತನ, ಉಪದಾನ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ ದಾಖಲೆಗಳನ್ನು ಸಲ್ಲಿಸಿ ತಮಗೆ ಆರ್ಥಿಕ ಸೌಲಭ್ಯವನ್ನು ಮಂಜೂರು ಮಾಡುವಂತೆ ಕೋರಿರುವ ಮೇರೆಗೆ ರೇಷ್ಮೆ ಕೃಷಿ ಅಭಿವೃದ್ಧಿ ಆಯಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪ್ರಕರಣದ ಬಗ್ಗೆ ದಾಖಲೆಗಳನ್ನು ಒದಗಿಸುತ್ತಾ, ಸೂಕ್ತ ಮಾರ್ಗದರ್ಶನ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಶ್ರೀ ಕೆ. ಶಿವಕುಮಾರ್, ರೇಷ್ಮೆ ನಿರೀಕ್ಷಕರು (ಕಾಣೆಯಾದ ನೌಕರರು) ಇವರ ಪತ್ನಿ ಶ್ರೀಮತಿ ಮಂಜುಳರವರಿಗೆ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಆಇ (ವಿಶೇಷ) 11 ಕುವಿವೇ /1987, ದಿನಾಂಕ: 21–03–1988ರ ಕಂಡಿಕೆ (4) ಮತ್ತು (5)ರಲ್ಲಿರುವ ಷರತ್ತುಗಳನ್ನು ಪೂರೈಸುವುದಕ್ಕೆ ಒಳಪಟ್ಟು ಕುಟುಂಬ ನಿವೃತ್ತಿ ವೇತನವನ್ನು ಪಾವತಿಸಲು ಕ್ರಮಕೈಗೊಳ್ಳಬಹುದೆಂದು ಸರ್ಕಾರದ ಪತ್ರ ಸಂಖ್ಯೆ: ತೋಇ 193 ರೇಇವಿ 2014, ದಿನಾಂಕ: 28–05–2015 ರಲ್ಲಿ ರೇಷ್ಮೆ ಆಯುಕ್ತರಿಗೆ ನಿರ್ದೇಶನ ನೀಡಲಾಗಿತ್ತು. ಸದರಿ ನಿರ್ದೇಶನದ ಬಗ್ಗೆ ಮಹಾಲೇಖಪಾಲರು ದಿನಾಂಕ: 07–09–2015ರ ಪತ್ರದಲ್ಲಿ ಸರ್ಕಾರದಿಂದ ಆದೇಶವಾಗಬೇಕೆಂದು ಕೋರಿರುವ ಮೇರೆಗೆ ಸೂಕ್ತ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರು ಸಲ್ಲಿಸಿರುವ ದಾಖಲೆಗಳನ್ವಯ ಶ್ರೀ ಕೆ. ಶಿವಕುಮಾರ್, ರೇಷ್ಮೆ ನಿರೀಕ್ಷಕರು ಇವರು ದಿನಾಂಕ: 04–08–2011ರಿಂದ ಕಾಣೆಯಾಗಿರುತ್ತಾರೆ. ನೌಕರರು ಕಾಣೆಯಾಗಿರುವ ಬಗ್ಗೆ ಇವರ ಪತ್ನಿ ಶ್ರೀಮತಿ ಮಂಜುಳ ಇವರು ದಿನಾಂಕ: 03–09–2015ರಂದು ಗುಂಡ್ಲುಪೇಟೆ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್. 356/3–09–2011ನ್ನು ದಾಖಲಿಸಿರುತ್ತಾರೆ. ಸದರಿ ದೂರಿನನ್ವಯ ಪ್ರಕರಣವು ದಾಖಲಾದ ದಿನದಿಂದ ಕಾಣೆಯಾಗಿರುವ ಶ್ರೀ ಕೆ. ಶಿವಕುಮಾರ್ ಇವರು ಪತ್ತೆ ಬಗ್ಗೆ ಠಾಣೆಯ ಸಿಬ್ಬಂದಿಗಳು ಎಲ್ಲಾ ರೀತಿಯ ಪ್ರಮಾಣಿಕ ಪ್ರಯತ್ನಗಳನ್ನು ಮಾಡಲಾಗಿಯೂ ಸಹ ಕೇಸು ಪತ್ತೆಯಾಗದ ಕಾರಣ ಸದರಿ ಕೇಸನ್ನು ಪತ್ತೆಯಾಗದ ಪ್ರಕರಣವೆಂದು ಪರಿಗಣಿಸಿ, ನಿಶ್ಚಲ ಕಡತದಲ್ಲಿಡಲಾಗಿದೆ ಎಂದು ಗುಂಡ್ಲುಪೇಟೆ ಪೊಲೀಸ್ ಠಾಣೆಯು ವರದಿಯನ್ನು ನೀಡಿರುವುದನ್ನು ಪತ್ತೆಯಾದ ಪ್ರಕರಣವೆಂದು ಪರಿಗಣಿಸಿರುವ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುವಂತೆ ಕಾಣೆಯಾದ ನೌಕರರ ಅವಲಂಭಿತರಿಗೆ ಕುಟುಂಬ ವೇತನ ಮತ್ತು ಇನ್ನಿತರ ಸೌಲಭ್ಯಗಳನ್ನು ಮಂಜೂರು ಮಾಡುವ ಕುರಿತಂತೆ ಪರಿಶೀಲಿಸಿದ್ದು, ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ/1987, ದಿನಾಂಕ: 21–03–1988ರ ಕಂಡಿಕೆ(4) ಮತ್ತು (5) ರಲ್ಲಿರುವ ಷರತ್ತುಗಳನ್ನು ಪೂರೈಸುವುದಕ್ಕೆ ಒಳಪಟ್ಟು ಕುಟುಂಬ ನಿವೃತ್ತಿ ವೇತನವನ್ನು ಪಾವತಿಸಲು ಸರ್ಕಾರವು ಮಂಜೂರು ಮಾಡಲು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 256 ರೇಇವಿ 2015 ಬೆಂಗಳೂರು, ದಿನಾಂಕ: 30–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ನೇಮಕಾತಿ ಪ್ರಾಧಿಕಾರವು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆರ್ಥಿಕ (ವಿಶೇಷ) 11 ಕುವಿವೇ/ 1987, ದಿನಾಂಕ: 21–03–1988ರ ಕಂಡಿಕೆ (4) ಮತ್ತು (5) ರಲ್ಲಿರುವ ಷರತ್ತುಗಳನ್ನು ಪೂರೈಸಿರುವುದನ್ನು ಖಚಿತಪಡಿಸಿಕೊಂಡ ನಂತರ ಶ್ರೀ ಕೆ. ಶಿವಕುಮಾರ್, ರೇಷ್ಮೆ ನಿರೀಕ್ಷಕರು, ತಾಂತ್ರಿಕ ಸೇವಾ ಕೇಂದ್ರ, ಹರವೆ ಇವರ ಪತ್ನಿಯಾದ ಶ್ರೀಮತಿ ಮಂಜುಳ ಇವರಿಗೆ ನಿಯಮಗಳನ್ವಯ ನೀಡಬಹುದಾದ ಕುಟುಂಬ ನಿವೃತ್ತಿ ವೇತನವನ್ನು ಪಾವತಿಸಲು ಸರ್ಕಾರವು ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: ಆಇ (ವಿಶೇಷ) 11 ಕುವಿವೇ/1987, ದಿನಾಂಕ: 21–03–1988ರ ಕಂಡಿಕೆ 6(ಊ) ರನ್ವಯ ವಿಮಾ ಸಂರಕ್ಷಣಾ ಹಣವನ್ನು ನಾಮ ನಿರ್ದೇಶಿತರಿಗೆ ಅಥವಾ ಕಾನೂನುಬದ್ಧ ವಾರಸುದಾರರಿಗೆ ಕಾಣೆಯಾದ ತಿಂಗಳಿನಿಂದ ಹಿಡಿದು ಏಳು ವರ್ಷಗಳ ನಂತರ ಸಂದಾಯ ಮಾಡಬಹುದು. ಪರಂತು, ಹಕ್ಕುದಾರರು ಕ್ರಮಬದ್ಧವಾದ ಮತ್ತು ನಿರ್ವಿವಾದ ಪುರಾವೆಯನ್ನು ಕಾಣೆಯಾದ ನೌಕರನು ಮೃತ ಪ್ರಮಾಣ ಪತ್ರವನ್ನೂ ಹಾಜರುಪಡಿಸಬೇಕು ಅಥವಾ ಭಾರತೀಯ ಸಾಕ್ಷಿ ಕಾಯಿದೆಯ 108ನೇ ವಿಧಿಯ ಪ್ರಕಾರ ಕಾಣೆಯಾದ ನೌಕರನ್ನು (ಳು) ಮೃತನಾದನೆಂದದು ಭಾವಿಸಿ, ಇದರ ಬಗ್ಗೆ ಕೋರ್ಟಿನಿಂದ ಪಡೆದ ಡಿಕ್ರಿಯನ್ನು ಹಾಜರು ಪಡಿಸಿದ ನಂತರ ವಿಮಾ ಹಣವನ್ನು ಸಂದಾಯ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ)ಯ ಟಿಪ್ಪಣಿ ಸಂಖ್ಯೆ: ಆಇ (ವಿ) 85 ಪಿಇಎನ್1 2015, ದಿನಾಂಕ 12–05–2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R.299

**(ಆರ್.ಎಲ್. ಚಿನ್ನಮ್ಮ)**

ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ)

ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸದಾಗಿ ಸೃಜಿಸಲಾದ ಭ್ರಷ್ಟಾಚಾರ ನಿಗ್ರಹ ದಳಕ್ಕೆ (Anti-Corruption Bureau) ಮಂಜೂರಾಗಿರುವ ಸಿಬ್ಬಂದಿ ಬಲವನ್ನು ವರ್ಗೀಕರಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ದಿನಾಂಕ: 14–03–2016.

2) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಆರ್.ಎಲ್.ಎನ್. (1)(87)/2015–16, ದಿನಾಂಕ: 29–03–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988 ಅನ್ನು 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ 'ನಿಗ್ರಹ ದಳ' ವನ್ನು (Anti-Corruption Bureau) ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದೆ:

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಅಪರ ಪೊಲೀಸ್ ಮಹಾನಿರ್ದೇಶಕರು (ಎಡಿಜಿಪಿ) | 01 |
| 2 | ಪೊಲೀಸ್ ಮಹಾನಿರೀಕ್ಷಕರು (ಐಜಿಪಿ) | 01 |
| 3 | ಪೊಲೀಸ್ ಅಧೀಕ್ಷಕರು (ಎಸ್‌ಪಿ) | 10 |
| 4 | ಪೊಲೀಸ್ ಉಪಾಧೀಕ್ಷಕರು (ಡಿವೈಎಸ್‌ಪಿ) | 35 |
| 5 | ಪೊಲೀಸ್ ನಿರೀಕ್ಷಕರು (ಪಿಐ) | 75 |
| 6 | ಹೆಡ್ ಕಾನ್ಸ್‌ಟೇಬಲ್/ಪೊಲೀಸ್ ಕಾನ್ಸ್‌ಟೇಬಲ್ (ಹೆಚ್‌ಸಿ/ಪಿಸಿ) | 200 |
| | **ಒಟ್ಟು** | **322** |

ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಹೀಗೆ ಭ್ರಷ್ಟಾಚಾರ ನಿಗ್ರಹ ದಳಕ್ಕೆ ಮಂಜೂರಾಗಿರುವ ಹುದ್ದೆಗಳನ್ನು ಆಡಳಿತಾತ್ಮಕ ಕಾರಣಗಳಿಗಾಗಿ ಕೇಂದ್ರಸ್ಥಾನ ಮತ್ತು ಪೊಲೀಸ್ ವಲಯ ಕೇಂದ್ರ ಕಛೇರಿಗಳ ವ್ಯಾಪ್ತಿಯಲ್ಲಿ ಹಂಚಿಕೆ ಮಾಡುವುದು ಅವಶ್ಯಕವಾಗಿದೆ ಎಂದು ತಿಳಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 189 ಪೊಸಿಪ 2016, ಬೆಂಗಳೂರು, ದಿನಾಂಕ: 30/03/2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭ್ರಷಾಚಾರ ನಿಗ್ರಹ ದಳಕ್ಕೆ ಸೃಜಿಸಲಾಗಿರುವ ಒಟ್ಟು 322 ಹುದ್ದೆಗಳನ್ನು ಆಡಳಿತಾತ್ಮಕ ಕಾರಣಗಳಿಗಾಗಿ ಕೇಂದ್ರಸ್ಥಾನ ಮತ್ತು 07 ಸಂಖ್ಯೆಯ ಪೊಲೀಸ್ ವಲಯ ಕೇಂದ್ರ ಕಛೇರಿಗಳ ವ್ಯಾಪ್ತಿಯಲ್ಲಿ ಅನುಬಂಧದಲ್ಲಿ ನೀಡಲಾಗಿರುವಂತೆ ಹಂಚಿಕೆ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಸರ್ಕಾರದ ಆದೇಶ ಸಂಖ್ಯೆ: ಒಇ 189 ಪೊಸಿಪ 2016, ದಿನಾಂಕ: 03–2016ರ ಅನುಬಂಧ ಕೇಂದ್ರ ಸ್ಥಾನ**

| ಕ್ರ. ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಎಡಿಜಿಪಿ | 01 |
| 2 | ಐಜಿಪಿ | 01 |
| 3 | ಎಸ್‌ಪಿ (ಬೆಂಗಳೂರು ನಗರ) | 01 |
| 4 | ಎಸ್‌ಪಿ (ಕೇಂದ್ರ ಸ್ಥಾನ) | 01 |
| 5 | ಎಸ್‌ಪಿ (ಆಡಳಿತ) | 01 |
| 6 | ಡಿವೈಎಸ್‌ಪಿ | 06 |
| 7 | ಪೊಲೀಸ್ ನಿರೀಕ್ಷಕರು | 17 |
| 8 | ಹೆಡ್ ಕಾನ್ಸ್‌ಟೇಬಲ್ | 10 |
| 9 | ಪೊಲೀಸ್ ಕಾನ್ಸ್‌ಟೇಬಲ್ | 30 |
| | **ಒಟ್ಟು** | **68** |

ವಲಯಗಳು

| ವಲಯ | ಜಿಲ್ಲೆ/ಘಟಕಗಳು | ಹುದ್ದೆಗಳ ಸಂಖ್ಯೆ | | | | |
|---|---|---|---|---|---|---|
| | | ಎಸ್‌ಪಿ | ಡಿವೈಎಸ್‌ಪಿ | ಪಿಐ | ಹೆಚ್‌ಸಿ | ಪಿಸಿ |
| ಕೇಂದ್ರ ವಲಯ ಬೆಂಗಳೂರು | ಬೆಂಗಳೂರು ಜಿಲ್ಲೆ | 1 | 1 | 2 | 2 | 4 |
| | ಕೋಲಾರ /ಕೆಜಿಎಫ್ | | 1 | 2 | 2 | 4 |
| | ತುಮಕೂರು | | 1 | 2 | 1 | 4 |
| | ರಾಮನಗರ | | 1 | 2 | 1 | 4 |
| | ಚಿಕ್ಕಬಳ್ಳಾಪುರ | | 1 | 2 | 1 | 4 |
| | **ಒಟ್ಟು** | **1** | **5** | **10** | **7** | **20** |
| ದಕ್ಷಿಣ ವಲಯ, ಮೈಸೂರು | ಮೈಸೂರು ಜಿಲ್ಲೆ/ ಮೈಸೂರು ನಗರ | 1 | 1 | 2 | 2 | 5 |
| | ಮಂಡ್ಯ | | 1 | 2 | 1 | 4 |
| | ಹಾಸನ | | 1 | 2 | 1 | 4 |
| | ಕೊಡಗು | | 1 | 2 | 1 | 4 |
| | ಚಾಮರಾಜನಗರ | | 1 | 2 | 1 | 4 |
| | **ಒಟ್ಟು** | **1** | **5** | **10** | **6** | **21** |
| ಉತ್ತರ ವಲಯ, ಬೆಳಗಾವಿ | ಬೆಳಗಾವಿ ಜಿಲ್ಲೆ/ ಬೆಳಗಾವಿ ನಗರ | 1 | 1 | 2 | 2 | 4 |
| | ಧಾರವಾಡ ಜಿಲ್ಲೆ/ ಹುಬ್ಬಳ್ಳಿ–ಧಾರವಾಡ ನಗರ | | 1 | 2 | 2 | 4 |
| | ವಿಜಯಪುರ | | 1 | 2 | 2 | 4 |
| | ಬಾಗಲಕೋಟೆ | | 1 | 2 | 2 | 4 |
| | ಗದಗ | | 1 | 2 | 1 | 4 |
| | ಒಟ್ಟು | 1 | 5 | 10 | 8 | 20 |
| ಪಶ್ಚಿಮ ವಲಯ, ಮಂಗಳೂರು | ದಕ್ಷಿಣ ಕನ್ನಡ ಜಿಲ್ಲೆ/ ಮಂಗಳೂರು ನಗರ | 1 | 1 | 2 | 2 | 5 |
| | ಉತ್ತರ ಕನ್ನಡ ಜಿಲ್ಲೆ, ಕಾರವಾರ | | 1 | 2 | 1 | 4 |
| | ಚಿಕ್ಕಮಗಳೂರು | | 1 | 2 | 1 | 4 |
| | ಉಡುಪಿ | | 1 | 2 | 1 | 4 |
| | **ಒಟ್ಟು** | **1** | **4** | **8** | **5** | **17** |
| ಪೂರ್ವ ವಲಯ, ದಾವಣಗೆರೆ | ದಾವಣಗೆರೆ | 1 | 1 | 2 | 2 | 5 |
| | ಚಿತ್ರದುರ್ಗ | | 1 | 2 | 1 | 4 |
| | ಹಾವೇರಿ | | 1 | 2 | 1 | 4 |
| | ಶಿವಮೊಗ್ಗ | | 1 | 2 | 1 | 4 |
| | **ಒಟ್ಟು** | **1** | **4** | **8** | **5** | **17** |
| ಈಶಾನ್ಯ ವಲಯ, ಕಲಬುರಗಿ | ಕಲಬುರಗಿ | 1 | 1 | 2 | 2 | 5 |
| | ಬೀದರ್ | | 1 | 2 | 1 | 4 |
| | ಯಾದಗಿರಿ | | 1 | 2 | 1 | 4 |
| | ಒಟ್ಟು | 1 | 3 | 6 | 4 | 13 |
| ಬಳ್ಳಾರಿ ವಲಯ, ಬಳ್ಳಾರಿ | ಬಳ್ಳಾರಿ | 1 | 1 | 2 | 2 | 4 |
| | ರಾಯಚೂರು | | 1 | 2 | 2 | 4 |
| | ಕೊಪ್ಪಳ | | 1 | 2 | 1 | 4 |
| | **ಒಟ್ಟು** | **1** | **3** | **6** | **5** | **12** |
| | **ಒಟ್ಟು** | **7** | **29** | **58** | **40** | **120** |

PR-300

**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧದ ಇಲಾಖೆ ವಿಚಾರಣೆ ಕುರಿತು.

**ಓದಲಾಗಿದೆ :** 1) ಡಾ॥ ಚಿದಾನಂದ ದುಂಡಪ್ಪ, ಸರ್ಕಾರಿ, ವಕೀಲರು ಇವರ ದೂರಿನ ಪತ್ರ ದಿನಾಂಕ: 01–04–2015.

2) ಕಾರಣ ಕೇಳುವ ಸೂಚನಾ ಪತ್ರ: ಸಂಖ್ಯೆ: ಒಇ 194 ಪಿಪಿಇ 2015, ದಿನಾಂಕ: 16–12–2015.

3) ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.ಸ) ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ಇವರ ಸಮಜಾಯಿಷಿ ದಿನಾಂಕ: 31–12–2015.

4) ಅಭಿಯೋಗ ಇಲಾಖೆಯ ಪತ್ರ ಸಂಖ್ಯೆ: ಡಿಪಿಎನ್: ದೂರು: 12–2015–16, ದಿನಾಂಕ: 18–02–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿ ಡಾ॥ ಚಿದಾನಂದ ದುಂಡಪ್ಪ, ಸರಿಕಾರ ವಕೀಲರು ಕಾಳಮ್ಮ ನಗರ, ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ ಇವರು ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು, ಇವರು ತಮ್ಮ ಪತ್ನಿಯವರಿಗೆ ಹಂಚಿಕೆಯಾದ ಸರ್ಕಾರಿ ವಸತಿಗೃಹದಲ್ಲಿ ದಿನಾಂಕ: 25–07–2008 ರಿಂದ 01–08–2013 ರವರೆಗೆ ಎಸಿಎಂಎಂ ನ್ಯಾಯಾಲಯ, ಬೆಂಗಳೂರು, ಮತ್ತು 13–07–2012 ರಿಂದ 01–08–2013 ರವರೆಗೆ ಕೃಷಿ ಇಲಾಖೆ, ಬೆಂಗಳೂರು ಇಲ್ಲಿ ನಿಯೋಜನೆ ಮೇರೆಗೆ ಹಾಗೂ ದಿನಾಂಕ:01–08–2014 ರಿಂದ ಇಲ್ಲಿಯವರೆಗೂ ವಾಸ ಮಾಡುತ್ತಿದ್ದರೂ ಕೂಡ ತಮ್ಮ ಸಂಬಳದಲ್ಲಿ ಸರ್ಕಾರಕ್ಕೆ ತಿಳಿಸದೇ ಮನೆ ಬಾಡಿಗೆ ಭತ್ಯೆಯನ್ನು ಪಡೆದು ಕೊಂಡು ನಿಯಮ ಉಲ್ಲಂಘನೆ ಮಾಡಿ ದುರ್ನಡತೆ ಎಸಗಿರುತ್ತಾರೆಂದು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸದರಿ ದೂರಿನ ಬಗ್ಗೆ ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ನಾಗರಿಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಅವರ ಸಮಜಾಯಿಷಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ಇವರು ದಿನಾಂಕ: 26–08–2008 ರಿಂದ 31–05–2013 ರವರೆಗೆ ಬೆಂಗಳೂರಿನ ಸರ್ಕಾರಿ ವಸತಿ ಗೃಹದಲ್ಲಿ ನಂತರ ಆಗಸ್ಟ್ 2013 ರಿಂದ ಜುಲೈ 2014 ರವರೆಗೆ ಕಲಬುರಗಿ ಸರ್ಕಾರಿ ವಸತಿ ಗೃಹದಲ್ಲಿ ವಾಸವಾಗಿದ್ದೇನೆ ಎಂದು ಜೂನ್ 2013 ಮತ್ತು ಜುಲೈ 2013, ನಂತರ ಆಗಸ್ಟ್ 2014 ರಲ್ಲಿ ಸರ್ಕಾರಿ ವಸತಿ ಗೃಹದಲ್ಲಿ ವಾಸವಾಗಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಕಾರಣ ಕೇಳುವ ಸೂಚನಾ ಪತ್ರದಲ್ಲಿ ಸೂಚಿಸಿದಂತೆ ರೂ. 4,17,485/– ಮನೆ ಬಾಕಿ ಬಾಡಿಗೆ ಆಗುವುದಿಲ್ಲ. ಆದರೆ ರೂ. 3,87,271/– ಮಾತ್ರ ಆಗುತ್ತದೆ. ಅದರಲ್ಲಿ ರೂ. 91,440/– ಈಗಾಗಲೇ ಕಟಾವಣೆ ಮಾಡಿದ್ದೇನೆ. ಬಾಕಿ ರೂ. 2,95,831/– ಬಾಕಿ ಇರುತ್ತದೆ. ಸದರಿ ಹಣವನ್ನು ಜನವರಿ 2016 ರಿಂದ ಜುಲೈ 2016 ರವರೆಗೆ ಕಟಾವಣೆ ಮಾಡಲು ಸಿದ್ದನಿದ್ದೇನೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಅಭಿಯೋಗ ನಿರ್ದೇಶಕರು ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ನಾಗರಿಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು, ಇವರಿಂದ ರೂ. 2,94,380/– ರ ಮನೆ ಬಾಡಿಗೆ ಭತ್ಯೆಯನ್ನು ವಸೂಲಿ ಮಾಡಬೇಕಾಗಿರುತ್ತದೆ. ಎಂಬುದಾಗಿ ತಮ್ಮ ಅಭಿಪ್ರಾಯವನ್ನು ನೀಡಿರುತ್ತಾರೆ. ಆದುದರಿಂದ ಶ್ರೀ ಎಸ್. ಆರ್. ಸೂಡಿ, ಕಾನೂನು, ಅಧಿಕಾರಿ (ಹಿ.) ಇವರು ಕಾನೂನು ಬಾಹಿರವಾಗಿ ಮನೆ ಬಾಡಿಗೆ ಭತ್ಯೆಯನ್ನು ಪಡೆದಿರುವ ಬಗ್ಗೆ ತಮ್ಮ ಲಿಖಿತ ಹೇಳಿಕೆಯಲ್ಲಿ ತಪ್ಪನ್ನು ಒಪ್ಪಿಕೊಂಡು ಪಡೆಯಲಾಗಿದ್ದ ಹೆಚ್ಚುವರಿ ಮನೆ ಬಾಡಿಗೆ ಮೊತ್ತವನ್ನು ಸರ್ಕಾರಕ್ಕೆ ಮರು ಪಾವತಿಸಲು ಒಪ್ಪಿಕೊಂಡಿರುವ ಹಿನ್ನೆಲೆಯಲ್ಲಿ ಮತ್ತು ಅಭಿಯೋಗ ನಿರ್ದೇಶಕರು ಶ್ರೀ ಎಸ್.ಆರ್. ಸೂಡಿ, ಇವರು ಪಾವತಿ ಮಾಡಬೇಕಾದ ಮೊತ್ತ ರೂ. 2,94, 380/– ಎಂದು ದೃಢೀಕರಿಸುವುದರಿಂದ ಸದರಿ ಮೊತ್ತವನ್ನು ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ಇವರಿಂದ ವಸೂಲಿ ಮಾಡುವುದರೊಂದಿಗೆ ಸದರಿಯವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಯಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 194 ಪಿಪಿಇ 2015, ಬೆಂಗಳೂರು, ದಿನಾಂಕ: 31–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಆರ್. ಸೂಡಿ, ಕಾನೂನು ಅಧಿಕಾರಿ (ಹಿ.) ನಾಗರಿಕ ಹಕ್ಕು ಜಾರಿ ನಿರ್ದೇಶನಾಲಯ, ಬೆಂಗಳೂರು ಇವರು ಸರ್ಕಾರದಿಂದ ಹೆಚ್ಚುವರಿಯಾಗಿ ಪಡೆದಿರುವ ಮೊತ್ತ ರೂ. 2,94,380/– (ಎರಡು ಲಕ್ಷ ತೊಂಭತ್ತು ನಾಲ್ಕು ಸಾವಿರ ಮೂರು ನೂರು ಎಂಭತ್ತು) ಗಳನ್ನು ವಸೂಲಿ ಮಾಡುವುದರೊಂದಿಗೆ ಸದರಿಯವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಯಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ

**P.R.301**

**S.C.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೋಲಿಸ್ ಸೇವೆಗಳು–ಬಿ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಮಂಜುನಾಥ ಸಿ.ಟಿ., ಸಹಾಯಕ ಉಪನ್ಯಾಸಕರು, ಸಿ.ಪಿ. ವಿಭಾಗ ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸ್ನಾತಕೋತ್ತರ ಪದವಿ ಪಡೆದ ದಿನಾಂಕದಿಂದಲೇ ಇವರ ಹುದ್ದೆಯನ್ನು ಉಪನ್ಯಾಸಕರ ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಇಡಿ 241 ಟಿಪಿಇ 82, ದಿನಾಂಕ: 11–06–1986
2) ಸರ್ಕಾರದ ಆದೇಶ ಸಂಖ್ಯೆ: ಇಡಿ 241 ಟಿಪಿಇ 82, ದಿನಾಂಕ: 09–09–1986
3) ಸರ್ಕಾರದ ಆದೇಶ ಸಂಖ್ಯೆ: ಇಡಿ 319 ಟಿಪಿಇ 05, ದಿನಾಂಕ: 17–03–2007
4) ಸರ್ಕಾರದ ಆದೇಶ ಸಂಖ್ಯೆ: ಇಡಿ 319 ಟಿಪಿಇ 05, ದಿನಾಂಕ: 18–06–2008
5) ಪತ್ರ ಸಂಖ್ಯೆ: ಡಿಟಿಇ 79 ಇಎಸ್‌ಟಿ 2(ಬಿ) 2015/2752, ದಿನಾಂಕ: 26–11–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ, ತಾಂತ್ರಿಕ ಶಿಕ್ಷಣ ಇಲಾಖೆಯ ಪಾಲಿಟೆಕ್ನಿಕ್ ವಿಭಾಗದಲ್ಲಿನ ತಾಂತ್ರಿಕ ವಿಷಯದ ಸಹಾಯಕ ಉಪನ್ಯಾಸಕರು ಪದವಿ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ಅವರ ಹುದ್ದೆಯನ್ನು ಉಪನ್ಯಾಸಕರ ಹುದ್ದೆಗೆ ಉನ್ನತ್ತೀಕರಿಸಿ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿದೆ. ಅದೇ ರೀತಿ, ಭವಿಷ್ಯದಲ್ಲಿ ಪದವಿ ವಿದ್ಯಾರ್ಹತೆಯನ್ನು ಹೊಂದುವ ಸಹಾಯಕ ಉಪನ್ಯಾಸಕರಿಗೂ ಸಹ ಅವರ ಹುದ್ದೆಯನ್ನು ಉಪನ್ಯಾಸಕರ ಹುದ್ದೆಗೆ ಉನ್ನತೀಕರಿಸಿ ಬಡ್ತಿ ನೀಡಲು ಕಲ್ಪಿಸಲಾಗಿದೆ.

2. ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ, ಸರ್ಕಾರದ ಆದೇಶ ಸಂಖ್ಯೆ ಇಡಿ 241 ಟಿಪಿಇ 82, ದಿನಾಂಕ: 11–06–1986ಕ್ಕೆ ಕೆಳಕಂಡಂತೆ ಸೇರ್ಪಡೆಗೊಳಿಸಿ ಆದೇಶಿಸಲಾಗಿದೆ.

(2) the existing Assistant Lecturers who possess Degree qualification in Engineering Technology or second class diploma in engineering and TTTI Diploma with 5 years professional and or teaching experience or AMIE (by examination) with 2 years professional and or teaching experience be promoted as Lecturers by upgrading the post held by them. Those Assistant Lecturers who acquire the qualification in future shall also be similarly promoted.

3. ಮೇಲೆ ಓದಲಾದ ಕ್ರ ಮ ಸಂಖ್ಯೆ (3)ರ ಆದೇಶದಲ್ಲಿ, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯದ ವ್ಯಾಪ್ತಿಯ ಪಾಲಿಟೆಕ್ನಿಕ್‌ಗಳಲ್ಲಿನ ತಾಂತ್ರಿಕೇತರ ವಿಭಾಗದಲ್ಲಿ Commercial practice ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಉಪನ್ಯಾಸಕರುಗಳು ದ್ವಿತೀಯ ದರ್ಜೆ ಸ್ನಾತಕೋತ್ತರ ಪದವಿ ವಿದ್ಯಾರ್ಹತೆ ಹೊಂದಿದ್ದು, 5 ವರ್ಷಗಳ ಸೇವೆಯನ್ನು ಪೂರೈಸಿದ್ದಲ್ಲಿ ಉಪನ್ಯಾಕರ ಹುದ್ದೆಗೆ ಉನ್ನತೀಕರಿಸಲು ಅವಕಾಶ ಕಲ್ಪಿಸಲಾಗಿದೆ. ಅದೇ ರೀತಿ, ಭವಿಷ್ಯದಲ್ಲಿ ಈ ವಿದ್ಯಾರ್ಹತೆಯನ್ನು ಹೊಂದುವ ಸಹಾಯಕ ಉಪನ್ಯಾಸಕರಿಗೂ ಸಹ ಅವರ ಹುದ್ದೆಯನ್ನು ಉಪನ್ಯಾಸಕರ ಹುದ್ದೆಗೆ ಉನ್ನತೀಕರಿಸಲು ಅವಕಾಶ ಕಲ್ಪಿಸಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ, ಮಂಜೂರಾದ ಉಪನ್ಯಾಸಕರ ಎಲ್ಲಾ ಹುದ್ದೆಗಳನ್ನು ಎಐಸಿಟಿಇ ನಿಯಮಗಳನುಸಾರ ನೇರ ನೇಮಕಾತಿಯಿಂದಲೇ ಭರ್ತಿ ಮಾಡಬೇಕಾದ ಕಾರಣ, ತಾಂತ್ರಿಕೇತರ ವಿಷಯದ Commercial practice ವಿಭಾಗದ ಸಹಾಯಕ ಉಪನ್ಯಾಸಕರುಗಳಿಗೆ ಭವಿಷ್ಯದಲ್ಲಿ ಯಾವುದೇ ಮುಂಬಡ್ತಿ ಇರುವುದಿಲ್ಲವಾದ ಕಾರಣ ಕೆಲವೊಂದು ಷರತ್ತುಗಳಿಗೊಳಪಡಿಸಿ ಒಂದು ಬಾರಿಯ ಕ್ರಮವಾಗಿ (one time measure) 45 ಸಹಾಯಕ ಉಪನ್ಯಾಸಕರ ಹುದ್ದೆಗಳನ್ನು ರಾಜ್ಯ ವೇತನ ಶ್ರೇಣಿಯಲ್ಲಿ ಉಪನ್ಯಾಸಕರ ಹುದ್ದೆಗೆ ಮೇಲ್ದರ್ಜೆಗೇರಿಸಲಾಗಿದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ (5) ಪ್ರಸ್ತಾವನೆಯಲ್ಲಿ, ಕೆಲವು ಸಹಾಯಕ ಉಪನ್ಯಾಸಕರಿಗೆ ಅವರುಗಳ Diploma in T.T. ವಿದ್ಯಾರ್ಹತೆ ಹೊಂದಿದ ದಿನಾಂಕದಿಂದಲೇ ಮತ್ತು ಬಿ.ಇ. ಪದವಿ ವಿದ್ಯಾರ್ಹತೆ ಹೊಂದಿದ ದಿನಾಂಕದಿಂದಲೇ ಅವರ ಹುದ್ದೆಗಳನ್ನು ಉಪನ್ಯಾಸಕರ ಹುದ್ದೆಗೆ ಮೇಲ್ದರ್ಜೆಗೇರಿಸಿ, ಮೇಲಿನ ಕಂಡಿಕೆ 2 ರಲ್ಲಿನ ಆದೇಶದ ಸೌಲಭ್ಯವನ್ನು ವಿಸ್ತರಿಸಿರುವ ನಿದರ್ಶನಗಳಂತೆ, ತಮಗೂ ಸಹ ಈ ಆದೇಶದ ಸೌಲಭ್ಯವನ್ನು ಸ್ನಾತಕೋತ್ತರ ಪದವಿ ಪಡೆದ ದಿನಾಂಕದಿಂದಲೇ (ಜೂನ್–2001) ರಾಜ್ಯ ವೇತನ ಶ್ರೇಣಿಯಲ್ಲಿ ಉಪನ್ಯಾಸಕರ ಹುದ್ದೆಗೆ ಮೇಲ್ದರ್ಜೆಗೇರಿಸುವ ಮೂಲಕ ವಿಸ್ತರಿಸುವಂತೆ ಶ್ರೀ ಮಂಜುನಾಥ.ಸಿ.ಟಿ. ಉಪನ್ಯಾಸಕರು, ಕಮರ್ಷಿಯಲ್ ಪ್ರಾಕ್ಟೀಸ್ ವಿಭಾಗ, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರು ಮನವಿ ಮಾಡಿದ್ದು, ಇದು ನ್ಯಾಯಸಮ್ಮತವಾಗಿರುತ್ತದೆಂದು, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಪ್ರಸ್ತಾಪಿಸಿರುತ್ತಾರೆ.

ಸರ್ಕಾರವು, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 219 ಟಿಪಿಇ 2015, ಬೆಂಗಳೂರು, ದಿನಾಂಕ: 23/03/2016.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ. ತಾಂತ್ರಿಕ ಶಿಕ್ಷಣ ಇಲಾಖೆಯ ತಾಂತ್ರಿಕೇತರ ವಿಭಾಗದ ಕಮರ್ಷಿಯಲ್ ಪ್ರಾಕ್ಟೀಸ್ ವಿಭಾಗದ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಮಂಜುನಾಥ.ಸಿ.ಟಿ. ಇವರು ಎಂ.ಕಾಂ. ಸ್ನಾತಕೋತ್ತರ ಪದವಿ ಹೊಂದಿದ ದಿನಾಂಕದಿಂದ (ಜೂನ್ 2001) ಜಾರಿಗೆ ಬರುವಂತೆ ಅವರು ಹೊಂದಿರುವ ಸಹಾಯಕ ಉಪನ್ಯಾಸಕರ ಹುದ್ದೆಯಿಂದ ಉಪನ್ಯಾಸಕರ ಹುದ್ದೆಗೆ ರಾಜ್ಯ ವೇತನ ಶ್ರೇಣಿಯಲ್ಲಿ ಮೇಲ್ದರ್ಜೆಗೇರಿಸಿ ಆದೇಶಿಸಲಾಗಿದೆ/

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 110 ಐಎಫ್‌ಎಸ್ 2016, ದಿನಾಂಕ: 30–01–2016ರ ಸಹಮತಿಯಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವೆಂಕಟೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

P.R.302

## ಕಂದಾಯ ಸಚಿವಾಲಯ

**ವಿಷಯ :** ರಾಜ್ಯದಲ್ಲಿರುವ ಲಂಬಾಣಿ ತಾಂಡಾ, ಗೊಲ್ಲರಹಟ್ಟಿ, ವಡ್ಡರಹಟ್ಟಿ, ಕುರುಬರಹಟ್ಟಿ, ನಾಯಕರ ಹಟ್ಟಿ, ಮಜರೆ ಗ್ರಾಮ, ಹಾಡಿ, ದೊಡ್ಡಿ, ಪಾಳ್ಯ, ಕ್ಯಾಂಪ್ ಕಾಲೋನಿ ಮತ್ತು ಇತರೆ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಸುತ್ತೋಲೆ ಸಮಸಂಖ್ಯೆ : ಆರ್‌ಡಿ 16 ಎಲ್‌ಆರ್‌ಡಿ 92, ದಿನಾಂಕ: 15–02–1993.
2. ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರಿಗೆ ಬರೆದಿರುವ ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್‌ಡಿ 3 ಎಲ್‌ಆರ್‌ಡಿ 93 (ಭಾ) ದಿನಾಂಕ 25–06–1994.
3. ನಿರ್ದೇಶಕರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಸುತ್ತೋಲೆ ಸಂಖ್ಯೆ: ತಾಂತ್ರಿಕ ಇತರೆ 25/94–95, ದಿನಾಂಕ: 17–10–1994.
4. ಸರ್ಕಾರಿ ಆದೇಶ ಸಂಖ್ಯೆ: ಕಂಇ 46 ಭೂದಾಪು 2013, ದಿನಾಂಕ: 20–07–2013.

ರಾಜ್ಯದಲ್ಲಿ ನೆಲೆಸಿರುವ ಲಂಬಾಣಿ (ಬಂಜಾರ) ಗೊಲ್ಲ, ಭೋವಿ, ನಾಯಕ, ಸೋಲಿಗ, ಕಾಡುಕುರುಬ, ಮುಂತಾದ ದುರ್ಬಲ ಸಮುದಾಯಗಳ ಜನರು ವಾಸಿಸುವ ಹಲವು ವಸತಿ ಪ್ರದೇಶಗಳು ಅರಣ್ಯ, ಬೆಟ್ಟಗುಡ್ಡಗಳ ತಪ್ಪಲು, ಖಾಸಗಿಯರ ಜಮೀನು, ಸರ್ಕಾರಿ ಗೋಮಾಳ, ಕಾವಲು ಇತ್ಯಾದಿ ಜಮೀನುಗಳಲ್ಲಿ ನಿರ್ಮಾಣಗೊಂಡು ಹಲವಾರು ವರ್ಷಗಳಿಂದ ಅಸ್ತಿತ್ವದಲ್ಲಿರುತ್ತವೆ. ಈ ಜನರು ಶತಮಾನಗಳಿಂದ ಇಂತಹ ಪ್ರದೇಶಗಳಲ್ಲಿ ಜನವಸತಿಗಳನ್ನು ಮಾಡಿಕೊಂಡು ಸಮಾಜದ ಮುಖ್ಯವಾಹಿನಿಗೆ ಬರದೆ, ತಮ್ಮದೇ ಆದ ರೀತಿ ನೀತಿ, ಜೀವನಶೈಲಿಗಳನ್ನು ರೂಢಿಸಿಕೊಂಡು ಬದುಕು ಸಾಗಿಸುತ್ತಾ ಬರುತ್ತಿದ್ದಾರೆ. ಇಂತಹ ದಾಖಲೆರಹಿತ ಜನವಸತಿ ಪ್ರದೇಶಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಹಾಗೂ ಅವುಗಳಿಗೆ ಕಾನೂನಿನ ಸ್ಥಾನಮಾನ ನೀಡಲು ಮತ್ತು ಅಲ್ಲಿ ನಿರ್ಮಿಸಿಕೊಂಡಿರುವ ವಸತಿ, ಕೊಟ್ಟಿಗೆ, ಹಿತ್ತಲು ಇತ್ಯಾದಿಗಳಿಗೆ ಹಕ್ಕುಪತ್ರ ನೀಡಿ ಸಮಾಜದ ಮುಖ್ಯವಾಹಿನಿಗೆ ತಂದು ಅವರನ್ನೂ ಅಭಿವೃದ್ಧಿ ಪಥದತ್ತ ಕೊಂಡೊಯ್ಯುವುದು ಅವಶ್ಯವೆಂದು ಮನಗಾಣಲಾಗಿದೆ. ಈ ದಿಶೆಯಲ್ಲಿ ಸರ್ಕಾರವು ಪ್ರಥಮವಾಗಿ ರಾಜ್ಯದಲ್ಲಿರುವ ದಾಖಲೆರಹಿತ ಲಂಬಾಣಿ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಉಲ್ಲೇಖ(1)ರಲ್ಲಿ ಓದಲಾಗಿರುವ ಸರ್ಕಾರದ ಸುತ್ತೋಲೆಯಂತೆ ಕುಟುಂಬಗಳ ಸಂಖ್ಯೆ: 60, ಜನಸಂಖ್ಯೆ: 300, ಜಮೀನಿನ ವಿಸ್ತೀರ್ಣ 900 ಎಕರೆ, ಮೂಲ ಗ್ರಾಮಕ್ಕೆ ಹೊಂದಿಕೊಂಡಿರಬಾರದು ಎಂಬಿತ್ಯಾದಿ ಮಾನದಂಡಗಳನ್ನು ನಿಗಧಿಪಡಿಸಿ ಅರ್ಹವಿರುವ ಎಲ್ಲಾ ಲಂಬಾಣಿ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಸೂಚನೆ ನೀಡಿತ್ತು. ಹಾಗೆಯೇ ಉಲ್ಲೇಖ(2)ರ ಪತ್ರದಲ್ಲಿ ಜನಸಂಖ್ಯೆ 500 ಕ್ಕಿಂತ ಮೇಲ್ಪಟ್ಟ ಅಥವಾ ಕುಟುಂಬಗಳ ಸಂಖ್ಯೆ 100 ಕ್ಕಿಂತ ಮೇಲ್ಪಟ್ಟ ಗೊಲ್ಲರ: ನಾಯಕರ: ವಡ್ಡರಹಟ್ಟಿ, ಹ್ಯಾಮ್ಲೆಟ್‌ಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಪ್ರಸ್ತಾವನೆಗಳನ್ನು ಕಳುಹಿಸಲು ಸೂಚಿಸಲಾಗಿತ್ತು. ಉಲ್ಲೇಖ(3) ರಲ್ಲಿ ಓದಲಾದ ಸುತ್ತೋಲೆಯಲ್ಲಿ ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ವಿವಿಧ ಹಂತಗಳಲ್ಲಿ ಇಲಾಖಾ ಸಿಬ್ಬಂದಿಗಳು ನಿರ್ವಹಿಸಬೇಕಾದ ಕೆಲಸ ಕಾರ್ಯಗಳ ಬಗ್ಗೆ ವಿವರಿಸಲಾಗಿತ್ತು.

ಈ ಪರಿವರ್ತನಾ ಕಾರ್ಯದಲ್ಲಿ ಗಣನೀಯ ಸಂಖ್ಯೆಯ ವಸತಿ ಪ್ರದೇಶಗಳು ಮೇಲ್ಕಂಡ ಸುತ್ತೋಲೆಗಳಲ್ಲಿ ನಿರ್ಧಿಷ್ಟಪಡಿಸಿದ ಮಾನದಂಡಗಳ ವ್ಯಾಪ್ತಿಗೊಳಪಡದೆ ಕೈಬಿಟ್ಟು ಹೋಗುತ್ತಿರುವುದು ಹಾಗೂ ಇದರ ಅನುಷ್ಠಾನದಲ್ಲಿ ಸಾಕಷ್ಟು ಗೊಂದಲ ಹಾಗೂ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿದ್ದನ್ನು ಗಮನಿಸಲಾಯಿತು. ಇದರ ಹಿನ್ನೆಲೆಯಲ್ಲಿ ಉಲ್ಲೇಖ(4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೊಲ್ಲರಹಟ್ಟಿ, ನಾಯಕರಹಟ್ಟಿ, ವಡ್ಡರಹಟ್ಟಿ, ಹ್ಯಾಮ್ಲೆಟ್ ಇತ್ಯಾದಿಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ವಿಧಿಸಲಾಗಿದ್ದ ಷರತ್ತನ್ನು ಸಡಿಲಗೊಳಿಸಿ "50 ಹಾಗೂ ಅದಕ್ಕಿಂತ ಹೆಚ್ಚಿನ ಮನೆಗಳಿರುವ ಅಥವಾ 250ಕ್ಕಿಂತ ಹೆಚ್ಚಿನ ಜನಸಂಖ್ಯೆ ಇರುವ" ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಆದೇಶಿಸಲಾಯಿತು. ಆದರೆ ಸದರಿ ಸಡಿಲಿಕೆ ಆದೇಶವು ಲಂಬಾಣಿ ತಾಂಡಾ, ಕ್ಯಾಂಪ್, ಕಾಲೋನಿ ಮುಂತಾದ ಜನವಸತಿಗಳಿಗೂ ಅನ್ವಯವಾಗುತ್ತದೆ ಎನ್ನುವುದರ ಕುರಿತು ಸ್ಪಷ್ಟತೆ ಇರುವುದಿಲ್ಲ. ಆದ ಕಾರಣ ಈ ಯೋಜನೆಯ ಪ್ರಗತಿ ಕುಂಠಿತಗೊಳ್ಳುತ್ತಾ ಬಂದಿತು.

ಮಿಗಿಲಾಗಿ ಗಣನೀಯ ಸಂಖ್ಯೆಯಲ್ಲಿರುವ ತಾಂಡಾ, ಹಟ್ಟಿ, ಹಾಡಿಗಳು ಅರಣ್ಯ ಪ್ರದೇಶ, ಗೋಮಾಳ, ಖರಾಬು, ಖಾಸಗಿಯವರ ಜಾಗ, ಕಾವಲು ಮುಂತಾದ ಮೀಸಲು ಪ್ರದೇಶಗಳಲ್ಲಿದ್ದು, ಇವುಗಳನ್ನು ಜಾರಿಯಲ್ಲಿರುವ ಸಾಮಾನ್ಯ ಆದೇಶದ ವ್ಯಾಪ್ತಿಯಲ್ಲಿ ತಂದು ಗ್ರಾಮಗಳಾಗಿ ಪರಿವರ್ತಿಸಲು ಸಾಧ್ಯವಾಗಿರುವುದಿಲ್ಲ. ಇಂತಹ ಜನವಸತಿ ಪ್ರದೇಶಗಳನ್ನು ಸಹ ಕಂದಾಯ ಗ್ರಾಮಗಳ ವ್ಯಾಪ್ತಿಗೆ ತರದೆ ಹೋದಲ್ಲಿ ಯೋಜನೆಯ ಉದ್ದೇಶ ಈಡೇರಿದಂತಾಗುವುದಿಲ್ಲ. ಇದಕ್ಕಾಗಿ ಆಯಾ ವರ್ಗದ ಜಮೀನುಗಳಿಗೆ ಸಂಬಂಧಪಟ್ಟ ಕಾಯ್ದೆಗಳಡಿಯಲ್ಲಿರುವ ಅವಕಾಶಗಳನ್ನು ಬಳಸಿಕೊಂಡು ಅರ್ಹವಾಗುವ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ತೀರ್ಮಾನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಎಲ್ಲಾ ಸುತ್ತೋಲೆ, ಅರೆ ಸರ್ಕಾರಿ ಪತ್ರ ಹಾಗೂ ಸರ್ಕಾರಿ ಆದೇಶಗಳನ್ನು ಪರಿಷ್ಕರಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 01 ಭೂದಾಪು 2016, ಬೆಂಗಳೂರು, ದಿನಾಂಕ 01–03–2016.**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ರಾಜ್ಯದಲ್ಲಿರುವ ಅರಣ್ಯ ಪ್ರದೇಶ, ಬೆಟ್ಟಗುಡ್ಡಗಳ ತಪ್ಪಲು, ಖಾಸಗಿಯವರ ಜಮೀನು, ಸರ್ಕಾರಿ ಜಮೀನು, ಖರಾಬು, ಗೋಮಾಳ, ಕಾವಲು ಇತ್ಯಾದಿ ಜಮೀನುಗಳಲ್ಲಿ ನಿರ್ಮಾಣಗೊಂಡಿರುವ ದಾಖಲೆರಹಿತ ಜನವಸತಿ ಪ್ರದೇಶಗಳಾದ ಲಂಬಾಣಿ ತಾಂಡಾ, ಗೊಲ್ಲರಹಟ್ಟಿ, ವಡ್ಡರಹಟ್ಟಿ, ಕುರುಬರ ಹಟ್ಟಿ, ಮಜರೆ ಗ್ರಾಮ, ನಾಯಕರ ಹಟ್ಟಿ, ಹಾಡಿ, ದೊಡ್ಡಿ, ಪಾಳ್ಯ, ಕ್ಯಾಂಪ್, ಕಾಲೋನಿ ಮುಂತಾದವುಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಹಾಗೂ ಅಲ್ಲಿಯ ನಿವಾಸಿಗಳಿಗೆ ಹಕ್ಕು ದಾಖಲಾತಿಗಳನ್ನು ನೀಡಲು ಆಯಾ ಕಾನೂನುಗಳಲ್ಲಿ ಇರುವ ಅವಕಾಶಗಳನ್ನು ಬಳಸಿಕೊಂಡು ಕೆಳಕಂಡ ಮಾನದಂಡಗಳನ್ನು ಅನುಸರಿಸಿ ಹೊಸದಾಗಿ ಕಂದಾಯ ಗ್ರಾಮಗಳನ್ನು ರಚಿಸಲು ಆದೇಶಿಸಿದೆ.

1. ಕುಟುಂಬಗಳ ಸಂಖ್ಯೆ ಸುಮಾರು 50 ಅಥವಾ ಜನಸಂಖ್ಯೆ ಸುಮಾರು 250ನ್ನು ಹೊಂದಿರುವ ದಾಖಲೆರಹಿತ ಜನವಸತಿ ಪ್ರದೇಶಗಳು.
2. ಗ್ರಾಮಕ್ಕಿರಬೇಕಾದ ಜಮೀನಿನ ವಿಸ್ತೀರ್ಣ ಕನಿಷ್ಠ ಸುಮಾರು 100 ಎಕರೆ ಅಥವಾ ಅದಕ್ಕೆ ಮೇಲ್ಪಟ್ಟು – (ಈ ಷರತ್ತನ್ನು ಬೆಟ್ಟಗುಡ್ಡಗಳ ತಪ್ಪಲು ಮತ್ತು ಅರಣ್ಯ ಪ್ರದೇಶದೊಳಗಿನ ಜನವಸತಿ ಪ್ರದೇಶಗಳ ಪ್ರಕರಣದಲ್ಲಿ ಸಕಾರಣದ ಸಮೇತ ಸಡಿಲಸಬಹುದು).

3. ಮೂಲ ಗ್ರಾಮಠಾಣಾಕ್ಕೆ ಹೊಂದಿಕೊಂಡಿರಬಾರದು (ಅಂದಾಜು 1 ಕಿ.ಮೀ. ಅಂತರ ಸೂಕ್ತ)

ಮೇಲ್ಕಂಡ ಮಾನದಂಡಗಳ ವ್ಯಾಪ್ತಿಗೆ ಒಳಪಡುವ ಲಂಬಾಣಿ ತಾಂಡಾ, ಗೊಲ್ಲರಹಟ್ಟಿ, ವಡ್ಡರಹಟ್ಟಿ, ಕುರುಬರ ಹಟ್ಟಿ, ನಾಯಕರ ಹಟ್ಟಿ, ಮಜರೆ ಗ್ರಾಮ, ಹಾಡಿ, ದೊಡ್ಡಿ, ಪಾಳ್ಯ, ಕ್ಯಾಂಪ್, ಕಾಲೋನಿ ಮತ್ತು ಇತರೆ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಅನುಬಂಧದಲ್ಲಿ ವಿವರಿಸಿರುವ ವಿಧಾನಗಳನ್ನು ಅನುಸರಿಸಿ ಕಂದಾಯ ಗ್ರಾಮಗಳಾಗಿ ಘೋಷಿಸಲು ಹಾಗೂ ಅಲ್ಲಿಯ ನಿವಾಸಿಗಳಿಗೆ ನಿಯಮಾನುಸಾರ ಹಕ್ಕು ದಾಖಲಾತಿಗಳನ್ನು ನೀಡಲು ಕ್ರಮ ಕೈಗೊಳ್ಳುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಪುಟ್ಟನಂಜಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

## ಅನುಬಂಧ

(ಸರ್ಕಾರದ ಆದೇಶ ಸಂಖ್ಯೆ: ಕಂಇ 01 ಭೂದಾಪು 2016 ಬೆಂಗಳೂರು, ದಿನಾಂಕ: 01–03–2016ರ ಅನುಬಂಧ)

**ವಿಷಯ :** ರಾಜ್ಯದಲ್ಲಿರುವ ಲಂಬಾಣಿ ತಾಂಡಾ, ಗೊಲ್ಲರಹಟ್ಟಿ, ವಡ್ಡರಹಟ್ಟಿ, ಕುರುಬರಹಟ್ಟಿ, ನಾಯಕರ ಹಟ್ಟಿ, ಮಜರೆ ಗ್ರಾಮ, ಹಾಡಿ, ದೊಡ್ಡಿ, ಪಾಳ್ಯ, ಕ್ಯಾಂಪ್ ಕಾಲೋನಿ ಮತ್ತು ಇತರೆ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲು ಅಥವಾ ಅಸ್ತಿತ್ವದಲ್ಲಿರುವ ಕಂದಾಯ ಗ್ರಾಮದ ಭಾಗವಾಗಿ ಪರಿಗಣಿಸಲು ಕಂದಾಯ ಹಾಗೂ ಇತರೆ ಇಲಾಖಾ ಅಧಿಕಾರಿಗಳು ಅನುಸರಿಸಬೇಕಾದ ಕ್ರಮಗಳ ಕುರಿತ ಮಾರ್ಗಸೂಚಿ.

**ಪರಿಕಲ್ಪನೆ:**

1. ಯಾವುದೇ ಒಂದು ಜನವಸತಿ ಪ್ರದೇಶವು ಅಭಿವೃದ್ಧಿಯ ಮುಖ್ಯವಾಹಿನಿಗೆ ಬರಬೇಕಾದರೆ ಅದಕ್ಕೆ ಸಮಾಜ ಮತ್ತು ಸರ್ಕಾರದ ಅಧಿಕೃತ ಮಾನ್ಯತೆ ಇರಬೇಕು. ರಾಜ್ಯದಲ್ಲಿರುವ ದುರ್ಬಲ ಮತ್ತು ಹಿಂದುಳಿದ ಸಮುದಾಯಗಳು ವಾಸಿಸುವ ಹಲವು ದಾಖಲೆ ರಹಿತ ಜನವಸತಿ ಪ್ರದೇಶಗಳು ಸರ್ಕಾರದ ಅಧಿಕೃತ ಮಾನ್ಯತೆ ಇಲ್ಲದೆ ಮಜರೆ ಗ್ರಾಮಗಳಾಗಿ ಅಸ್ತಿತ್ವದಲ್ಲಿರುತ್ತವೆ. ಇಂತಹ ದಾಖಲೆರಹಿತ ಮಜರೆ ಗ್ರಾಮಗಳನ್ನು ಅಧಿಕೃತವಾಗಿ ಗುರುತಿಸಲು ಕಂದಾಯ ಗ್ರಾಮವೆಂದು ಸರ್ಕಾರದಿಂದ ಘೋಷಿಸಲಾಗುತ್ತದೆ.

2. ದಾಖಲೆರಹಿತ ಜನವಸತಿ ಪ್ರದೇಶಗಳು ಸಾಮಾನ್ಯವಾಗಿ ತಾಂಡಾ, ಹಟ್ಟಿ, ಹಾಡಿ, ದೊಡ್ಡಿ, ಪಾಳ್ಯ, ಮಜರೆ, ಕ್ಯಾಂಪ್, ಕಾಲೋನಿ ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಡುತ್ತವೆ. ಇಂತಹ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಹೊಸದಾಗಿ ಕಂದಾಯ ಗ್ರಾಮವೆಂದು ಘೋಷಿಸಲು ಇಲ್ಲವೆ ಅದನ್ನು ಹಾಲಿ ಇರುವ ಕಂದಾಯ ಗ್ರಾಮದ ಭಾಗವಾಗಿ ಪರಿಗಣಿಸಲು ಅಥವಾ ಅಸ್ತಿತ್ವದಲ್ಲಿರುವ ಗ್ರಾಮದಲ್ಲಿ ಸೇರ್ಪಡೆಗೊಳಿಸಿಕೊಳ್ಳಲು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಪ್ರಕರಣ 5ರ ಅಡಿಯಲ್ಲಿ ಅಧಿಸೂಚನೆ ಹೊರಡಿಸಲಾಗುತ್ತದೆ.

3. ಈ ರೀತಿ ಅಧಿಸೂಚನೆಗೊಂಡ ತಾಂಡಾ, ಹಟ್ಟಿ, ಹಾಡಿ ಇತ್ಯಾದಿ ದಾಖಲೆರಹಿತ ಜನವಸತಿ ಪ್ರದೇಶಗಳು ಕಂದಾಯ ಗ್ರಾಮಗಳಾಗಿ ಪರಿವರ್ತನೆಗೊಂಡಿರುವುದಕ್ಕೆ ಸೂಚಕವಾಗಿ ಅವಕ್ಕೆ ಲಗತ್ತು ಮಾಡಲಾಗಿರುವ ಕೃಷಿ ಇತ್ಯಾದಿ ವಿವಿಧ ವರ್ಗದ ಜಮೀನುಗಳಿಗೆ ಪ್ರತ್ಯೇಕವಾದ ಗ್ರಾಮನಕ್ಷೆ, ಆರ್‌ಟಿಸಿ, ಆಕಾರ್‌ಬಂದ್ ಇತ್ಯಾದಿ ಭೂದಾಖಲೆಗಳು ಸಿದ್ದಗೊಳ್ಳುತ್ತವೆ. ಅದರಲ್ಲಿ ಗ್ರಾಮಠಾಣವಾಗಿ ಪರಿಗಣಿತವಾದ ಪ್ರದೇಶಕ್ಕೆ ಪಂಚಾಯತಿ/ಸ್ಥಳೀಯ ಸಂಸ್ಥೆಗಳ ದಾಖಲೆಗಳು ರೂಪಗೊಳ್ಳುತ್ತವೆ. ಕಂದಾಯ ಗ್ರಾಮವನ್ನು ಘಟಕವಾಗಿ ಪರಿಗಣಿಸಿ ತಮ್ಮ ಕಾರ್ಯಯೋಜನೆಗಳನ್ನು ರೂಪಿಸುವ ಇತರೆ ಇಲಾಖೆಗಳು ಅವರಿಗೆ ಸಂಬಂಧಿಸಿದ ದಾಖಲೆಗಳನ್ನು ಹೊಸದಾಗಿ ಸೃಷ್ಟಿಸಿಕೊಳ್ಳುತ್ತವೆ.

4. ಹೊಸ ಕಂದಾಯ ಗ್ರಾಮವು ಯಾವ ಮೂಲ ಗ್ರಾಮ/ಗ್ರಾಮಗಳಿಂದ ಬೇರ್ಪಟ್ಟು ರಚನೆಯಾಗಿದೆಯೋ ಅಂತಹ ಮೂಲ ಗ್ರಾಮದ ಭೂದಾಖಲೆಗಳು, ಪಂಚಾಯ್ತಿ/ಸ್ಥಳೀಯ ಸಂಸ್ಥೆಗಳ ದಾಖಲೆಗಳು ಹಾಗೂ ಇತರೆ ಇಲಾಖೆ/ ಶಾಸನಬದ್ಧ ಪ್ರಾಧಿಕಾರಗಳ ದಾಖಲೆಗಳು ಸಹ ಅಗತ್ಯ ಬದಲಾವಣೆಗಳೊಂದಿಗೆ ಕಾಲೋಚಿತಗೊಳ್ಳಬೇಕಾಗುತ್ತದೆ. ತಾಂಡಾ ಇತ್ಯಾದಿಗಳು ಅಧಿಸೂಚಿತ ಗ್ರಾಮದ ಭಾಗವಾಗಿ ಅಥವಾ ಗ್ರಾಮದ ವ್ಯಾಪ್ತಿಗೆ ಸೇರ್ಪಡೆಯಾದಾಗ ಆ ಜನವಸತಿ ಪ್ರದೇಶವನ್ನು ಗ್ರಾಮಠಾಣವಾಗಿ ಪರಿಗಣಿಸಿ ಭೂದಾಖಲೆಗಳು ಹಾಗೂ ಪಂಚಾಯಿತಿ ದಾಖಲೆಗಳಲ್ಲಿ ಅಗತ್ಯ ನಮೂದು / ತಿದ್ದುಪಡಿಗಳನ್ನು ಮಾಡಿಕೊಳ್ಳಲಾಗುತ್ತದೆ. ಜೊತೆಗೆ ಅಂತಹ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳಲ್ಲಿ ವಾಸವಿರುವ ಜನರು ವಾಸ ಹಾಗೂ ಇತರೆ ಉದ್ದೇಶಗಳಿಗೆ ಬಳಸುತ್ತಿರುವ ಜಾಗಗಳಿಗೆ ಅಧಿಕೃತ ಸ್ವಾಧೀನದ ಹಕ್ಕು ನೀಡುವ ಕಾರ್ಯವೂ ಆಗಬೇಕಾಗುತ್ತದೆ. ಇಷ್ಟೆಲ್ಲಾ ಪ್ರಕ್ರಿಯೆಗಳು ಜರುಗಿದ ನಂತರವೇ ತಾಂಡಾ, ಹಟ್ಟಿ, ಹಾಡಿ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳು ಕಂದಾಯ ಗ್ರಾಮಗಳಾಗಿ ಪರಿವರ್ತನೆಗೊಂಡಿವೆ ಎಂದು ಪರಿಗಣಿಸಲ್ಪಡುತ್ತದೆ.

   ಮೇಲ್ಕಂಡ ಎಲ್ಲಾ ಪ್ರಕ್ರಿಯೆಗಳನ್ನು ಕೆಳಕಂಡ 6 ಹಂತಗಳಲ್ಲಿ ನಡೆಸಬೇಕಾಗುತ್ತದೆ.

**5. ಹೊಸ ಕಂದಾಯ ಗ್ರಾಮ ರಚನೆಯ ಹಂತಗಳು:**

1. ಪ್ರಸ್ತಾವನೆ ರೂಪಿಸುವ ಹಂತ
2. ಪ್ರಾಥಮಿಕ ಅಧಿಸೂಚನೆ ಹೊರಡಿಸುವ
3. ವಿಚಾರಣೆ ನಡೆಸುವ ಹಂತ
4. ಅಂತಿಮ ಅಧಿಸೂಚನೆ ಹೊರಡಿಸುವ ಹಂತ
5. ಅಂತಿಮ ಅಧಿಸೂಚನೆಯ ನಂತರ ಭೂದಾಖಲೆಗಳನ್ನು ಸಿದ್ದಪಡಿಸುವ / ಅಮಲು ಮಾಡಿ ಸ್ವತಂತ್ರ ಗ್ರಾಮವಾಗಿ ಅಸ್ತಿತ್ವಕ್ಕೆ ತರುವ ಹಂತ.

6. ಹೊಸದಾಗಿ ಕಂದಾಯ ಗ್ರಾಮವಾಗಿ ಪರಿವರ್ತನೆಯಾದ ಅಥವಾ ಅಸ್ತಿತ್ವದಲ್ಲಿರುವ ಕಂದಾಯ ಗ್ರಾಮದ ಭಾಗವಾಗಿ ಘೋಷಿತವಾದ ತಾಂಡಾ ಇತ್ಯಾದಿ ಜನವಸತಿ ಪ್ರದೇಶಗಳ ನಿವಾಸಿಗಳಿಗೆ ಹಕ್ಕು ದಾಖಲೆಗಳನ್ನು ನೀಡುವ ಮತ್ತು ಗ್ರಾಮ ಪಂಚಾಯತಿ/ಸ್ಥಳೀಯ ಸಂಸ್ಥೆಗಳ ದಾಖಲೆಗಳನ್ನು ಕಾಲೋಚಿತಗೊಳಿಸುವ ಹಂತ.

**6. <u>ಪ್ರಸ್ತಾವನೆ ರೂಪಿಸುವ ಹಂತ:</u>**

ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಿದ ಮಾನದಂಡಗಳಂತೆ ಅರ್ಹತೆ ಪಡೆಯುವ ತಾಂಡಾ, ಹಟ್ಟಿ, ಹಾಡಿ ಇತ್ಯಾದಿ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮವಾಗಿ ಪರಿವರ್ತಿಸಲು ಅಥವಾ ಹಾಲಿ ಇರುವ ಗ್ರಾಮದ ಭಾಗವಾಗಿ ಪರಿಗಣಿಸಲು ತಾಲ್ಲೂಕು ಮಟ್ಟದಲ್ಲಿ ಕೆಲಸ ಮಾಡುವ ಹಿರಿಯ ಕಂದಾಯ ಅಧಿಕಾರಿಗಳೇ ಖುದ್ದಾಗಿ ಸ್ಥಳಕ್ಕೆ ಭೇಟಿ ನೀಡಿ ಪ್ರಸ್ತಾವನೆಯನ್ನು ಸಿದ್ಧಪಡಿಸಬೇಕು. ಸದರಿ ದಾಖಲೆರಹಿತ ಜನವಸತಿಯನ್ನು ಕಂದಾಯ ಗ್ರಾಮವಾಗಿ ಘೋಷಿಸಲು ಅಥವಾ ಕಂದಾಯ ಗ್ರಾಮದ ಭಾಗವಾಗಿ ಪರಿಗಣಿಸಲು, ಪರಿವರ್ತನೆಯಾಗುವ ಆ ಗ್ರಾಮಗಳಿಗೆ ಯಾವ ಹೆಸರನ್ನಿಡಬೇಕೆಂಬುದರ ಬಗ್ಗೆ ಸ್ಥಳೀಯರ ಅಭಿಪ್ರಾಯ ಅಗತ್ಯ. ಈ ರೀತಿ ಅಭಿಪ್ರಾಯವನ್ನು ಪಡೆಯುವಾಗ ಅದ್ಯತೆ ಮೇಲೆ ಕನಿಷ್ಠ ಮೂರು ಹೆಸರುಗಳನ್ನು ಗ್ರಾಮಸ್ಥರಿಂದ ಕೇಳಿ ಪಡೆಯಬೇಕು. ಇಂತಹ ಹೆಸರುಗಳ ಪೈಕಿ ಒಂದನ್ನು ಸ್ಥಳೀಯರು ಹೇಳಿದ ಆದ್ಯತೆಯನ್ನು ಗಮನದಲ್ಲಿರಿಸಿಕೊಂಡು ಆ ಹೆಸರು ತಾಲ್ಲೂಕಿನಲ್ಲಿ ಪುನರಾವರ್ತನೆಯಾಗದ ರೀತಿಯಲ್ಲಿ ಆಯ್ಕೆ ಮಾಡಬೇಕು. ಒಂದು ವೇಳೆ ತಾಂಡಾ, ಹಾಡಿ, ಹಟ್ಟಿ ಇತ್ಯಾದಿ ದಾಖಲೆರಹಿತ ಜನವಸತಿ ಪ್ರದೇಶಗಳ ನಿವಾಸಿಗಳು ಒಂದೇ ಹೆಸರನ್ನು ಇಡಲು ಸೂಚಿಸಿದಲ್ಲಿ ಅದನ್ನು ಚುನಾವಣೆಯಲ್ಲಿ ಅನುಸರಿವಂತೆ ಲಾಟರಿ ಎತ್ತುವ ಮೂಲಕ ಯಾವ ಜನವಸತಿ ಪ್ರದೇಶಕ್ಕೆ ಇಡಬೇಕೆಂದು ನಿರ್ಧರಿಸಬಹುದು. ಹಾಗೆ ಆ ಹೆಸರನ್ನು ಹೊಸದಾಗಿ ರಚಿತವಾಗುವ ಕಂದಾಯ ಗ್ರಾಮದ ಹೆಸರು ಎಂದು ಅಧಿಸೂಚನೆಯಲ್ಲಿ ಪ್ರಸ್ತಾಪಿಸಬೇಕು.

**<u>6(ಎ) ಹೊಸ ಗ್ರಾಮವನ್ನು ರಚಿಸಲು ಪ್ರಸ್ತಾವನೆ ರೂಪಿಸುವಾಗ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕು</u>**

(1) ಮೂಲ ಗ್ರಾಮದ ನಕ್ಷೆಯಲ್ಲಿ ನೂತನ ಗ್ರಾಮವಾಗಿ ಪರಿವರ್ತಿಸಲು ಉದ್ದೇಶಿಸಿರುವ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶವನ್ನು ಬೇರೆ ಶಾಯಿಯಿಂದ ಸ್ಪಷ್ಟವಾಗಿ ಗುರುತಿಸುವುದು.

(2) ಈ ರೀತಿ ಗುರುತಿಸುವಾಗ ಮೂಲ ಗ್ರಾಮದ ಗ್ರಾಮಠಾಣದ ಗಡಿಗೆ ಹಾಲಿಯಿರುವ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶವು ಕೊನೆಪಕ್ಷ ಒಂದು ಕಿ.ಮೀ. ಅಂತರವಿರುವಂತೆ ನೋಡಿಕೊಳ್ಳುವುದು ಸೂಕ್ತ.

(3) ಉದ್ದೇಶಿತ ಗ್ರಾಮಕ್ಕೆ ಕನಿಷ್ಠ (ಸುಮಾರು) 100 ಎಕರೆ ಅಥವಾ ಅದರ ಮೇಲ್ಪಟ್ಟು ವಿಸ್ತೀರ್ಣ ಸೇರುವಂತೆ ನೋಡಿಕೊಳ್ಳುವುದು ಸೂಕ್ತ.

(4) ಮೂಲ ಗ್ರಾಮದ ನಕಾಶೆಯಲ್ಲಿ ಹೊಸ ಗ್ರಾಮ ಬೇರ್ಪಡಿಸುವ ಬಾಬ್ತು ಸರ್ವೆ ನಂಬರುಗಳನ್ನು ವಿಭಜಿಸಿ ಕೆಂಪು ಮಸಿಯಿಂದ ಹೊಸ ಗ್ರಾಮದ ಗಡಿಯನ್ನು ಗುರುತಿಸುವುದು ಹಾಗೂ ಗಡಿ ಗ್ರಾಮದ ಚೆಕ್ ಬಂದಿಯನ್ನು ದಾಖಲಿಸುವುದು.

(5) ಈ ರೀತಿ ಗುರುತಿಸಿದ ಎರಡೂ (ಹಳೆಯ & ಹೊಸ ಗ್ರಾಮ) ಗ್ರಾಮಗಳಿಗೆ ಸರ್ವೆ ನಂಬರುಗಳನ್ನು ಪ್ರತ್ಯೇಕವಾಗಿ ಈಗಾಗಲೇ ಸರ್ವೆ ಇಲಾಖೆಯಲ್ಲಿ ಅನುಸರಿಸುತ್ತಿರುವ ಪದ್ಧತಿಗೆ ಅನುಗುಣವಾಗಿ ಒಂದರಿಂದ ಪ್ರಾರಂಭಿಸಿ ಸರ್ವೆ ನಂಬರುಗಳನ್ನು ಸೂಚಿಸುವುದು.

(6) ಗ್ರಾಮಗಳನ್ನು ವಿಭಜಿಸುವ ವೇಳೆಯಲ್ಲಿ ಗ್ರಾಮದ ಸರ್ವೆ ನಂ.ಗಳು ಒಂದೇ ಕಡೆ ಬರುವಂತೆ ವಿಭಜಿಸತಕ್ಕದ್ದು. ಯಾವುದೇ ಕಾರಣಕ್ಕೂ ಸರ್ವೆ ನಂ. ಗಳನ್ನು ಉಡಾಫೆಯಾಗಿ (ಗ್ರಾಮದ ಗಡಿಯಿಂದ ಪ್ರತ್ಯೇಕವಾಗಿ) ಬಾರದಂತೆ ಎಚ್ಚರಿಕೆ ವಹಿಸಬೇಕು.

(7) ಮೂಲ ಗ್ರಾಮ ಹಾಗೂ ಉದ್ದೇಶಿತ ಗ್ರಾಮದ ಸರ್ವೆ ನಂ. ಗಳನ್ನು ಯಾವುದೇ ರೀತಿ ವಿಭಜಿಸದಂತೆ ಪೂರಾ ಸ.ನಂ. ಗಳನ್ನು ಯಥಾವತ್ತಾಗಿ ಸೇರಿಸತಕ್ಕದ್ದು ಹಾಗೂ ಯಾವುದೇ ಕಾರಣದಿಂದ ಭಾಗಶಃ ಸರ್ವೆ ನಂ.ಗಳನ್ನು ರಾಜ್ಯಪತ್ರ ಪ್ರಕಟಣೆಯಲ್ಲಿ ಬಾರದಂತೆ ಗಮನಹರಿಸುವುದು.

(8) ಕಾವಲ್, ಗೋಮಾಳ, ಅರಣ್ಯ ಮುಂತಾದ ಅಪಾರ ವಿಸ್ತೀರ್ಣದ ಏಕ ಸರ್ವೆ ನಂಬರ್ ಜಮೀನುಗಳಲ್ಲಿ ದಾಖಲೆ ರಹಿತ ಜನವಸತಿಗಳು ಬಂದಿದ್ದರೆ ಅವುಗಳನ್ನು ಕಂದಾಯ ಗ್ರಾಮವಾಗಿ ಪರಿವರ್ತಿಸುವಾಗ ಆ ಜನವಸತಿ ಪ್ರದೇಶವನ್ನೊಳಗೊಂಡಂತೆ ಅಲ್ಲಿ ಸಕ್ರಮಗೊಂಡಿರುವ ಜಮೀನುಗಳ ಬ್ಲಾಕ್‌ಗಳನ್ನು ಸಾಧ್ಯವಾದಷ್ಟು ಒಳಗೆ ಸೇರಿಸಿಕೊಂಡು ಗ್ರಾಮದ ಎಲ್ಲೆಯು ಸದರಿ ಸರ್ವೆ ನಂಬರಿನ ಒಂದು ಅಂಚಿಗೆ ಬರುವಂತೆ ಗಡಿ ಗುರುತು ಮಾಡಿ ಮೇಲ್ಕಂಡ ಮಾನದಂಡಗಳನ್ನನುಸರಿಸಿ ಒಟ್ಟು ವಿಸ್ತೀರ್ಣದಲ್ಲಿ ಆ ಗ್ರಾಮಕ್ಕೆ ಲಗತ್ತಾಗಬೇಕಾದ ಜಮೀನಿನ ವಿಸ್ತೀರ್ಣವನ್ನು ನಿಗಧಿಪಡಿಸಬೇಕು.

(9) ಮೂಲ ಗ್ರಾಮದಿಂದ ಬೇರ್ಪಡೆಯಾದ ಹೊಸ ಗ್ರಾಮದ ವಿಸ್ತೀರ್ಣ ಮತ್ತು ಆಕಾರ ಹಾಗೂ ಉಳಿಕೆ ಗ್ರಾಮದ ವಿಸ್ತೀರ್ಣ ಮತ್ತು ಆಕಾರಗಳನ್ನು ಒಂದುಗೂಡಿಸಿದರೆ ಮೂಲ ಗ್ರಾಮದ ಆಕಾರಬಂದಿನ ಸರ್ವೆ ನಂ. ಗಳ ಒಟ್ಟು ವಿಸ್ತೀರ್ಣ ಮತ್ತು ಆಕಾರಕ್ಕೆ ತಾಳೆ ಹೊಂದಬೇಕು.

(10) ಉದ್ದೇಶಿತ ಹೊಸ ಗ್ರಾಮದ ಗಡಿಯನ್ನು ಗುರುತಿಸಿದ ನಂತರ ಸದರಿ ನಕ್ಷೆಯಲ್ಲಿ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶದ ಗ್ರಾಮಠಾಣಾವನ್ನು ನಿಖರವಾದ ಅಳತೆಯಿಂದ ಗುರುತಿಸಿ ಸರ್ವೆ ನಂಬರವಾರು ಅದರ ವಿಸ್ತೀರ್ಣವನ್ನು ಕಂಡುಹಿಡಿಯತಕ್ಕದ್ದು. ಇದಕ್ಕಾಗಿ ಕೆ.ಎಸ್.ಆರ್.ಎಸ್.ಎ.ಸಿ. ಇವರ ನೆರವು ಪಡೆಯಬಹುದು ಅಥವಾ ಟೋಟಲ್ ಸ್ಟೇಷನ್ ಸರ್ವೆ ವಿಧಾನವನ್ನು ಅಳವಡಿಸಿ ಗ್ರಾಮಠಾಣದ ವಿಸ್ತೀರ್ಣವನ್ನು ನಿಗಧಿಪಡಿಸಬಹುದು.

(11) ಯಾವುದಾದರೂ ದಾಖಲೆ ರಹಿತ ಜನವಸತಿ ಪ್ರದೇಶವು ಮೂಲ ಗ್ರಾಮದ ನಕ್ಷೆಯಲ್ಲಿ ಊರು/ ಗ್ರಾಮಠಾಣ ಅಥವಾ ಇತರೆ ಹೆಸರಿನಿಂದ ಮೊದಲೇ ಗುರುತಿಸಲ್ಪಟ್ಟಿದ್ದಲ್ಲಿ ಸದರಿ ಜನವಸತಿಯ ಪ್ರಸ್ತುತ ವ್ಯಾಪ್ತಿಯನ್ನು ನಿಖರವಾಗಿ ಗುರುತಿಸಿ ಆ ವಿಸ್ತೀರ್ಣವನ್ನೂ ಸೇರಿಸಿ ಗ್ರಾಮಠಾಣವೆಂದು ಘೋಷಿಸಲು ಪ್ರಸ್ತಾವನೆಯಲ್ಲಿ ಒಳಪಡಿಸಬೇಕು.

(12) ಸದರಿ ಪ್ರದೇಶವನ್ನು ಉದ್ದೇಶಿತ ಹೊಸ ಗ್ರಾಮದ ಗ್ರಾಮಠಾಣಾ ಪ್ರದೇಶವೆಂದು ಅಧಿಸೂಚನೆಯಲ್ಲಿ ನಮೂದಿಸತಕ್ಕದು.

(13) ಹೀಗೆ ಗ್ರಾಮಠಾಣಾ ಪ್ರದೇಶ ಗುರುತು ಮಾಡುವಾಗ ಭವಿಷ್ಯದಲ್ಲಿ ಆಗಬಹುದಾದ ಗ್ರಾಮಠಾಣಾ ಪ್ರದೇಶದ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಳ್ಳತಕ್ಕದ್ದು.

(14) ಹೊಸ ಗ್ರಾಮ ಮತ್ತು ಮೂಲ ಗ್ರಾಮದ ಉಳಿಕೆ ಸರ್ವೆ ನಂ. ಬಾಬ್ತು ಬದಲಾವಣೆಯಾದ ಹೊಸ ಸರ್ವೆ ನಂಬರ್‌ಗಳು ಹಾಗೂ ಅವುಗಳ ಹಳೇ ಸರ್ವೆ ನಂಬರ್‌ಗಳು ಹಾಗೂ ಆಕಾರ ಒಳಗೊಂಡ ತಃಖ್ತೆಯನ್ನು ತಯಾರಿಸತಕ್ಕದ್ದು.

ಮೇಲೆ ಸೂಚಿಸಿದ ವಿಷಯಗಳನ್ನು ಗಮನದಲ್ಲಿಟ್ಟುಕೊಂಡ ಹೊಸ ಗ್ರಾಮಗಳ ರಚನೆ ಬಗ್ಗೆ ಪ್ರಸ್ತಾವನೆ ತಯಾರಿಸತಕ್ಕದ್ದು.

6(ಬಿ) ಪ್ರಸ್ತಾವನೆಯ ಜೊತೆಗೆ ಕರಡು ಪ್ರಾಥಮಿಕ ಅಧಿಸೂಚನೆಯನ್ನು ಸಿದ್ಧಪಡಿಸಿ ಲಗತ್ತಿಸಬೇಕು. ಸದರಿ ಅಧಿಸೂಚನೆಯಲ್ಲಿ ತಾಂಡಾ ಇತ್ಯಾದಿ ಜನವಸತಿ ಪ್ರದೇಶಗಳಿಗೆ ಹಾಲಿ ಇರುವ ಹೆಸರು ಮತ್ತು ಅದಕ್ಕೆ ಪ್ರಸ್ತಾಪಿಸಲಿರುವ ಹೊಸ ಹೆಸರು ಹಾಗೂ ಅದು ಒಳಪಡುವ ಪಂಚಾಯ್ತಿಯ ವ್ಯಾಪ್ತಿಯ ವಿವರವನ್ನು ನಮೂದಿಸಬೇಕು. ಪ್ರಸ್ತಾಪಿತ ಹೊಸ ಕಂದಾಯ ಗ್ರಾಮಕ್ಕೆ ಸೇರಲ್ಪಡುವ ಸರ್ವೆ ನಂಬರ್ ಜಮೀನು ಮತ್ತು ವಿಸ್ತೀರ್ಣವನ್ನು ನಮೂದಿಸುವಾಗ ಹಳೇ ಸರ್ವೆ ನಂಬರ್ ಮತ್ತು ವಿಸ್ತೀರ್ಣ ಹಾಗೂ ಅದಕ್ಕೆ ನೀಡುವ ಹೊಸ ಸರ್ವೆ ನಂಬರ್ ಮತ್ತು ವಿಸ್ತೀರ್ಣವನ್ನು ಅಧಿಸೂಚನೆಯಲ್ಲಿ ಸ್ಪಷ್ಟವಾಗಿ ನಮೂದಿಸಬೇಕು. ಹಾಗೇಯೇ ಗ್ರಾಮಠಾಣಕ್ಕಾಗಿ ನಿಗಧಿಪಡಿಸುವ ವಿಸ್ತೀರ್ಣವನ್ನು ಟೋಟಲ್ ಸ್ಟೇಷನ್ ಸರ್ವೆ ಮೂಲಕ ಗುರುತಿಸಿ ಅದರ ವಿಸ್ತೀರ್ಣವನ್ನು ಅಧಿಸೂಚನೆಯಲ್ಲಿ ತರಬೇಕು. ಹಾಗೂ ಆ ಜಾಗವು ಯಾವ ಸರ್ವೆನಂಬರ್‌ನಿಂದ ತೆಗೆಯಲಾಗಿದೆಯೋ ಅಂತಹ ಸರ್ವೆ ನಂಬರ್‌ನಿಂದ ಗ್ರಾಮ ಠಾಣಕ್ಕೆ ತೆಗೆದುಕೊಂಡ ವಿಸ್ತೀರ್ಣವನ್ನು ಕಡಿತಗೊಳಿಸಿ ಉಳಿದ ವಿಸ್ತೀರ್ಣವನ್ನು ಅಧಿಸೂಚನೆಯಲ್ಲಿ ಆ ಸರ್ವೆ ನಂಬರ್‌ನ ಮುಂದೆ ತರಬೇಕು.

6(ಸಿ) ಕರಡು ಅಧಿಸೂಚನೆಯ ಎರಡನೇ ಭಾಗದಲ್ಲಿ ವಿಭಜನೆಯ ನಂತರ ಮೂಲ ಗ್ರಾಮದಲ್ಲಿ ಉಳಿಯುವ ಸರ್ವೆ ನಂಬರುಗಳಿಗೆ ಹಳೆ ಸರ್ವೆ ನಂಬರ್ ಮತ್ತು ವಿಸ್ತೀರ್ಣ ಹಾಗೂ ಅವುಗಳಿಗೆ ನೀಡುವ ಹೊಸ ಸರ್ವೆ ನಂಬರ್ ಮತ್ತು ವಿಸ್ತೀರ್ಣವನ್ನು ಸ್ಪಷ್ಟವಾಗಿ ನಮೂದಿಸಬೇಕು. ಮೂಲ ಗ್ರಾಮದ ಗ್ರಾಮಠಾಣಕ್ಕೆ ಹೊಂದಿಕೊಂಡ ವ್ಯಾಪ್ತಿಯ ಯಾವುದಾದರೂ ಸರ್ವೆ ನಂಬರ್‌ಗಳಲ್ಲಿ ವಸತಿಗಳು ಬಂದಿದ್ದರೆ ಆ ಸರ್ವೆ ನಂಬರ್ ಭಾಗವನ್ನು ಗ್ರಾಮಠಾಣವೆಂದು ನಮೂದಿಸಿ ಅಧಿಸೂಚನೆಗೆ ಪ್ರಸ್ತಾಪಿಸಬೇಕು. ಹಾಗೆಯೇ ಗ್ರಾಮದ ಗಡಿಯಿಂದ 1 ಕಿ.ಮೀ. ಅಂತರದ ಒಳಗೆ ಬರುವ ವಸತಿ ಪ್ರದೇಶ ಅಥವಾ ಹೊಸ ಕಂದಾಯ ಗ್ರಾಮವಾಗಿ ಪರಿವರ್ತನೆಗೊಳ್ಳಲು ಅರ್ಹವಾಗದ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳನ್ನು ಅಧಿಸೂಚನೆಗೆ ಒಳಪಡಿಸಿ ಅವುಗಳ ವಿಸ್ತೀರ್ಣವನ್ನು ಗ್ರಾಮಠಾಣವೆಂದು ನಮೂದಿಸಬೇಕು.

**7. ಪ್ರಾಥಮಿಕ ಅಧಿಸೂಚನೆಯ ಹಂತ:**

7(1) ಈ ಹಂತದಲ್ಲಿ ತಾಲ್ಲೂಕು/ ಉಪ ವಿಭಾಗದಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಅಧಿಕಾರಿಗಳು, ಕಂದಾಯ, ಭೂ ಮಾಪನ ಹಾಗೂ ಗ್ರಾಮ ಪಂಚಾಯತಿಗಳಲ್ಲಿ ಅನುಷ್ಠಾನಗೊಳ್ಳುವ ಅಂಶವನ್ನು ಗಮನದಲ್ಲಿರಿಸಿಕೊಂಡು ಪರಿಶೀಲನೆ ನಡೆಸಬೇಕು. ತಪ್ಪು ಒಪ್ಪುಗಳಿದ್ದಲ್ಲಿ ಅವನ್ನು ಸರಿಪಡಿಸಿ ಭೂಕಂದಾಯ ಕಾಯ್ದೆಯ ಕಲಂ 6(1)ರ ನಿಯಮ 4 ರಡಿಯಲ್ಲಿ ಪ್ರಾಥಮಿಕ ಅಧಿಸೂಚನೆ ಹೊರಡಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕು.

7(2) ದಾಖಲೆ ರಹಿತ ಜನವಸತಿ ಪ್ರದೇಶಗಳು ನಗರ/ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಬಂದಿದ್ದರೆ ಅವುಗಳನ್ನು ಕಂದಾಯ ಗ್ರಾಮವಾಗಿಸುವ ಅವಶ್ಯಕತೆ ಬರುವುದಿಲ್ಲ. ಆದಾಗ್ಯೂ ಅಂತಹ ಜನವಸತಿಗಳಲ್ಲಿರುವ ನಿವಾಸಿಗಳಿಗೆ ಹಕ್ಕು ದಾಖಲೆಗಳನ್ನು ನೀಡಲು ಈ ಯೋಜನೆಯನ್ನು ಬಳಸುವ ಪ್ರಸಂಗ ಬಂದಲ್ಲಿ ಆ ಬಗ್ಗೆ ವಾಸ್ತವ ಸ್ಥಿತಿಯನ್ನು ವಿವರಿಸಿ ಸರ್ಕಾರದ ಪೂರ್ವಾನುಮತಿ ಪಡೆದು ಮುಂದುವರೆಯಬೇಕು.

7(3) ಜಿಲ್ಲಾಧಿಕಾರಿಗಳಿಂದ ಸ್ವೀಕೃತವಾಗುವ ಪ್ರಾಥಮಿಕ ಅಧಿಸೂಚನೆಯ ಪ್ರಸ್ತಾವನೆಗಳನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಅದರಲ್ಲಿ ಒಳಗೊಂಡಿರುವ ತಾಂಡಾ ಇತ್ಯಾದಿ ದಾಖಲೆರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸುವ ಸಂಬಂಧ ಇತರೆ ಇಲಾಖೆಗಳು ಅಂದರೆ ಅರಣ್ಯ, ಪಶುಸಂಗೋಪನೆ, ಕೃಷಿ ನೀರಾವರಿ ಇತ್ಯಾದಿ ಸಂಬಂಧಿತ ಇಲಾಖೆಗಳ ಸಹಮತಿ/ಅಭಿಪ್ರಾಯ ಅವಶ್ಯವೆನಿಸಿದಲ್ಲಿ ಅದನ್ನು ಪಡೆಯಬೇಕಾಗುತ್ತದೆ. ಕಂದಾಯ ಗ್ರಾಮವಾಗಿ ಪರಿವರ್ತನೆಯಾಗುವ ತಾಂಡಾ ಇತ್ಯಾದಿ ಜನವಸತಿ ಪ್ರದೇಶಗಳು ನಿರ್ಮಾಣಗೊಂಡಿರುವ ಜಮೀನುಗಳು ಯಾವ ಮೂಲ ಉದ್ದೇಶಕ್ಕೆ ಮೀಸಲಾಗಿಸಲ್ಪಟ್ಟಿವೆ ಎಂಬುದನ್ನು ಗಮನಿಸಿ ಆ ಉದ್ದೇಶದಿಂದ ಅವುಗಳನ್ನು ಮುಕ್ತಗೊಳಿಸುವ ಪ್ರಕ್ರಿಯೆಯನ್ನು ಜೊತೆಯಲ್ಲಿಯೇ ನಡೆಸಲು ಭೂಕಂದಾಯ ಕಾಯ್ದೆಯ ಸಂಬಂಧಿತ ಕಲಂಗಳಲ್ಲಿ ಸೂಚಿಸಿರುವಂತೆ ಕ್ರಮವಹಿಸಬೇಕು.

**8. ವಿಚಾರಣಾ ಹಂತ:**

ಸರ್ಕಾರದಿಂದ ಅನುಮೋದನೆಗೊಂಡು ಸ್ವೀಕೃತವಾಗುವ ಪ್ರಾಥಮಿಕ ಅಧಿಸೂಚನೆಗಳನ್ನು ಜಿಲ್ಲಾಧಿಕಾರಿಗಳು, ಸ್ಥಳೀಯ ಪಂಚಾಯ್ತಿ/ ಸಂಸ್ಥೆಗಳು ಹಾಗೂ ಸಾರ್ವಜನಿಕರ ಮಾಹಿತಿಗಾಗಿ ಪ್ರಚುರಪಡಿಸಬೇಕು. ಈ ಸಂಬಂಧ ಸ್ವೀಕೃತವಾಗುವ ಸಲಹೆ/ಸೂಚನೆ/ಆಕ್ಷೇಪಣೆಗಳನ್ನು ಕರ್ನಾಟಕ ಭೂಕಂದಾಯ ನಿಯಮಗಳು, 1967ರ ನಿಯಮ 6 ರಿಂದ 9 ರಲ್ಲಿ ನಿರ್ದಿಷ್ಟಪಡಿಸಲಾದಂತೆ ವಿಚಾರಣೆ ನಡೆಸಿ ತಮ್ಮ ಅಭಿಪ್ರಾಯದೊಂದಿಗೆ ಪುನಃ ಸರ್ಕಾರಕ್ಕೆ ಅಂತಿಮ ಅಧಿಸೂಚನೆಗಾಗಿ ಸಲ್ಲಿಸಬೇಕು.

**9. ಅಂತಿಮ ಅಧಿಸೂಚನೆ**

ಈ ಹಂತದಲ್ಲಿ ಪ್ರಾಥಮಿಕ ಅಧಿಸೂಚನೆಗೆ ಬಂದ ಸಲಹೆ/ಸೂಚನೆ/ಆಕ್ಷೇಪಣೆಗಳ ಕುರಿತು ಜಿಲ್ಲಾಧಿಕಾರಿಗಳ ವಿಚಾರಣೆಯಿಂದ ವ್ಯಕ್ತವಾದ ಅಭಿಪ್ರಾಯ/ ಶಿಫಾರಸ್ಸುಗಳನ್ನು ಗಮನದಲ್ಲಿರಿಸಿಕೊಂಡು ಸ್ವೀಕೃತವಾಗಿದ್ದ ಆಕ್ಷೇಪಣೆಗಳನ್ನು ಮಾನ್ಯ ಮಾಡುವ ಅಥವಾ ತಿರಿಸ್ಕರಿಸುವ ಕುರಿತು ಸೂಕ್ತ ತೀರ್ಮಾನ ಕೈಗೊಂಡು ಸರ್ಕಾರವು ಅಂತಿಮ ಅಧಿಸೂಚನೆಯನ್ನು ಹೊರಡಿಸುತ್ತದೆ. ಈ ರೀತಿ ಹೊರಡಿಸುವ ಅಂತಿಮ ಅಧಿಸೂಚನೆಯಲ್ಲಿ ಕಂದಾಯ ಗ್ರಾಮವಾಗಿ ಪರಿವರ್ತನೆಗೊಳ್ಳುವ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳು ನಿರ್ಮಾಣವಾಗಿರುವ ವಿಸ್ತೀರ್ಣದ (ಗ್ರಾಮಠಾಣದ) ಜಾಗವನ್ನು ಅದರ ಮೂಲ ಉದ್ದೇಶಗಳಿಂದ ಮುಕ್ತಗೊಳಿಸಿ ಅಧಿಸೂಚನೆ ಹೊರಡಿಸಬೇಕು. ಖಾಸಗಿ ಜಮೀನುಗಳಲ್ಲಿ ನಿರ್ಮಾಣಗೊಂಡಿರುವ ತಾಂಡಾ ಇತ್ಯಾದಿ ಜನವಸತಿ ಪ್ರದೇಶಗಳನ್ನು ಪರಿವರ್ತಿಸುವಾಗ ಭೂ ಸುಧಾರಣಾ ಕಾಯ್ದೆಯ ನಿಯಮಗಳಿಗೆ ಅನುಸಾರ ಕ್ರಮ ಜರುಗಿಸಿ ಅಂತಿಮ ಅಧಿಸೂಚನೆ ಹೊರಡಿಸಬೇಕು. ಅರಣ್ಯ ಪ್ರದೇಶಗಳಲ್ಲಿ ನಿರ್ಮಾಣವಾಗಿರುವ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿಗಳು The Scheduled Tribes and other Traditional Forest Dwellers (Recognition of Forest Rights) Act 2006 ರ ಪ್ರಕರಣ 2 ರನ್ವಯ ಕಂದಾಯ ಗ್ರಾಮವಾಗಲು ಅರ್ಹತೆ ಪಡೆದಿದ್ದರೆ ಅವುಗಳಿಗೆ ಅಂತಿಮ ಅಧಿಸೂಚನೆ ಹೊರಡಿಸಬೇಕು. ಈ ಅಧಿನಿಯಮದ ವ್ಯಾಪ್ತಿಯಲ್ಲಿ ಕಂದಾಯ ಗ್ರಾಮವಾಗಲು ಅರ್ಹತೆ ಪಡೆಯದ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳ ವಿಷಯದಲ್ಲಿ ಅರಣ್ಯ ಇಲಾಖೆಯಿಂದ ಅವಶ್ಯ ಅನುಮತಿ ಪಡೆದು ಅಧಿಸೂಚನೆ ಹೊರಡಿಸಬೇಕು.

**10. ಅಂತಿಮ ಅಧಿಸೂಚನೆಯ ನಂತರದ ಕಾರ್ಯಗಳು:**

ಅಂತಿಮ ಅಧಿಸೂಚನೆ ಹೊರಡಿಸಲ್ಪಟ್ಟ ನಂತರ ಅದನ್ನು ಸಂಬಂಧಪಟ್ಟ ಎಲ್ಲಾ ಇಲಾಖೆಗಳ ದಾಖಲಾತಿಗಳಲ್ಲಿ ಅಮಲು ಮಾಡುವ ಹಾಗೂ ಅಲ್ಲಿ ವಾಸವಿರುವ ನಿವಾಸಿಗಳಿಗೆ ಸೇರಿರುವ ಜಾಗಕ್ಕೆ ಹಕ್ಕು ದಾಖಲೆಗಳನ್ನು ನೀಡುವ ಕೆಲಸಗಳನ್ನು ಕೈಗೊಳ್ಳಬೇಕು.

**<u>ಪರಿವರ್ತಿತ ಗ್ರಾಮದ ನಿವಾಸಿಗಳಿಗೆ ಹಕ್ಕು ದಾಖಲೆಗಳನ್ನು ನೀಡುವ ಕುರಿತು:</u>**

ಕಂದಾಯ ಗ್ರಾಮವಾಗಿ ಪರಿವರ್ತನೆಗೊಂಡ ಹಾಗೂ ಹಾಲಿ ಇರುವ ಕಂದಾಯ ಗ್ರಾಮಕ್ಕೆ ಹೊಂದಿಕೊಂಡಂತೆ ಇರುವ ಅಥವಾ ಗ್ರಾಮದ ವ್ಯಾಪ್ತಿಯಲ್ಲಿದ್ದು ಪ್ರತ್ಯೇಕ ಕಂದಾಯ ಗ್ರಾಮವಾಗಲು ಅರ್ಹತೆ ಪಡೆಯಲಾಗದಂತಹ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳಲ್ಲಿರುವ ನಿವಾಸಿಗಳಿಗೆ ಅವರ ಸ್ವಾಧೀನಾನುಭವದಲ್ಲಿರುವ ಜಾಗಗಳಿಗೆ ಹಕ್ಕು ದಾಖಲೆಗಳನ್ನು ನೀಡುವ ಕಾರ್ಯವನ್ನು ಕೈಗೊಳ್ಳಬೇಕಾಗುತ್ತದೆ. ಈ ಸಂಬಂಧ ಅದು ಸರ್ಕಾರಿ ಜಮೀನಾಗಿದ್ದಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮ, 1969 ರನ್ವಯ ಖಾಸಗಿ ಜಮೀನಾಗಿದ್ದಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆಯನ್ವಯ ಹಾಗೂ ಅರಣ್ಯ ಭೂಮಿಯಾಗಿದ್ದಲ್ಲಿ The Scheduled Tribes and other Traditional Forest Dwellers (Recognition of Forest Rights) Act, 2006 ಪ್ರಕರಣ 2 ರನ್ವಯ ಕ್ರಮವಹಿಸಿ ಹಕ್ಕಪತ್ರ ನೀಡುವ ಕಾರ್ಯವನ್ನು ಕೈಗೊಳ್ಳಬೇಕಾಗುತ್ತದೆ.

**11. <u>ವಿವಿಧ ಇಲಾಖೆಗಳ ದಾಖಲಾತಿಗಳನ್ನು ಕಾಲೋಚಿತಗೊಳಿಸುವ ಕುರಿತು:</u>**

ಈ ಹಂತದಲ್ಲಿ ಕೆಳಕಂಡ ಇಲಾಖೆಗಳು ಕಾರ್ಯನಿರ್ವಹಿಸುತ್ತವೆ.

**(1) <u>ಕಂದಾಯ ಇಲಾಖೆ:</u>**

ಕಂದಾಯ ಇಲಾಖೆಯು ಗ್ರಾಮದ ದಫ್ತರುಗಳಲ್ಲಿ ಹೊಸದಾಗಿ ಸೃಷ್ಟಿಯಾದ ಕಂದಾಯ ಗ್ರಾಮಕ್ಕೆ ಪ್ರತ್ಯೇಕ ಆರ್.ಟಿ.ಸಿ. ಮ್ಯುಟೇಷನ್, ಖಾತೆ ವಹಿ, ಕಿರ್ದಿ, ಬಂಬರ್ ತಃಖ್ತೆ ಮುಂತಾದ ಗ್ರಾಮಲೆಕ್ಕಾಧಿಕಾರಿಗಳ ಕೈಪಿಡಿಯಲ್ಲಿ ನಿರ್ದಿಷ್ಟಪಡಿಸಿರುವ ಎಲ್ಲಾ ವಹಿಗಳನ್ನು ಹೊಸದಾಗಿ ರೂಪಿಸಬೇಕು. ಹಾಗೇಯೇ ಮೂಲ ಗ್ರಾಮದ ದಫ್ತರನಲ್ಲಿಯೂ ಸಹ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡು ಅದಕ್ಕೆ ಪ್ರತ್ಯೇಕ ದಫ್ತರಗಳನ್ನು ನಿರ್ವಹಿಸಬೇಕು.

**(2) <u>ಭೂ ಮಾಪನ ಇಲಾಖೆ:</u>**

ಕಂದಾಯ ಇಲಾಖೆ ಮತ್ತು ಭೂ ಮಾಪನ ಇಲಾಖೆಗಳಲ್ಲಿ ಕಂದಾಯ ಆಡಳಿತಕ್ಕೆ ಹಾಗೂ ಸಾರ್ವಜನಿಕರಿಗೆ ಉಪಯೋಗವಾಗುವಂತಹ ಹಲವಾರು ದಾಖಲೆಗಳು ಗ್ರಾಮವಾರು ನಿರ್ವಹಿಸಲ್ಪಡುತ್ತಿರುತ್ತವೆ. ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳು ಹೊಸ ಗ್ರಾಮಗಳಾಗಿ ಘೋಷಿಸಲ್ಪಟ್ಟ ನಂತರ ಎಲ್ಲಾ ಕಂದಾಯ ಹಾಗೂ ಸರ್ವೆ ದಾಖಲೆಗಳನ್ನು ಆಯಾ ಗ್ರಾಮಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ನಿರ್ವಹಿಸುವುದು ಅತ್ಯವಶ್ಯಕವಾಗಿರುತ್ತದೆ. ಆದುದರಿಂದ ಅಂತಿಮ ಅಧಿಸೂಚನೆಯಾದ ತಾಂಡಾ ಇತ್ಯಾದಿ ದಾಖಲೆ ರಹಿತ ಜನವಸತಿ ಪ್ರದೇಶಗಳಿಗೆ ಹೊಸದಾಗಿ ಆಕಾರ ಬಂದ್, ಅಸೆಸ್‌ಮೆಂಟ್ ವಹಿ, ಗ್ರಾಮ ನಕಾಶೆ, ಕೆ.ಡಿ.ಪಿ/ ಕೆ.ಜಿ.ಪಿ. ಟಿಪ್ಪಣಿ ಮುಂತಾದ ಸರ್ವೆ ದಾಖಲೆಗಳನ್ನು ಸಿದ್ದಪಡಿಸಬೇಕು. ಹಾಗೆಯೇ ಮೂಲ ಗ್ರಾಮಗಳಿಗೂ ಈ ಎಲ್ಲಾ ದಾಖಲೆಗಳನ್ನು ಅಗತ್ಯ ತಿದ್ದುಪಡಿಯೊಂದಿಗೆ ಪ್ರತ್ಯೇಕವಾಗಿ ನಿರ್ವಹಿಸುವ ವ್ಯವಸ್ಥೆ ಬಗ್ಗೆ ಈ ಕೆಳಗಿನ ಸೂಚನೆಗಳಂತೆ ಕ್ರಮ ಕೈಗೊಳ್ಳತಕ್ಕದ್ದು.

ಎ. ಮೂಲ ಗ್ರಾಮದಿಂದ ಬೇರ್ಪಡೆಯಾದ ಹೊಸ ಗ್ರಾಮಕ್ಕೆ ಪ್ರತ್ಯೇಕವಾದ ದಾಖಲೆಗಳು ಅವಶ್ಯಕವಾಗಿರುವುದರಿಂದ ಅಂತೆಯೇ ಅಂತಿಮ ಅಧಿಸೂಚನೆಯಂತೆ ಬೇರ್ಪಡೆಯಾದ ಗ್ರಾಮದ ಸರ್ವೆ ನಂ ಗಳು ಹಾಗೂ ಉಳಿಕೆ ಮೂಲ ಗ್ರಾಮದ ಸರ್ವೆ ನಂ ಗಳ ಬಾಬ್ತು ಮೂಲ ದಾಖಲೆಗಳಿಂದ ನಕಲುಗಳನ್ನು ತಯಾರಿಸಿ ಅವುಗಳನ್ನು ತಹಶೀಲ್ದಾರರಿಂದ ಭೂದಾಖಲೆಗಳ ಸಹಾಯಕ ನಿರ್ದೇಶಕರಿಂದ ದೃಢೀಕರಿಸುವುದು.

ಬಿ. ಹೊಸ ಗ್ರಾಮ ಹಾಗೂ ಉಳಿದ ಮೂಲ ಗ್ರಾಮಕ್ಕೆ ಸೇರಿದ ಸರ್ವೆ ನಂ. ಬಾಬ್ತು ಪ್ರತ್ಯೇಕವಾದ ಕಚ್ಚಾ ನಕ್ಷೆ ತಯಾರಿಸಿ ಮುದ್ರಣಕ್ಕಾಗಿ ಭೂ ಮಾಪನ ಇಲಾಖೆಯ ಆಯುಕ್ತರಿಗೆ ಕಳುಹಿಸುವುದು.

ಸಿ. ಮೂಲ ಗ್ರಾಮದ ಕಡತಗಳಲ್ಲಿ ಸದರಿ ಗ್ರಾಮದಲ್ಲಿ ಹೊಸ ಗ್ರಾಮ ರಚನೆ ಬಗ್ಗೆ ಸರ್ಕಾರದಿಂದ ಆದ ಆದೇಶದ ಬಗ್ಗೆ ಕೆಂಪು ಮಸಿಯಿಂದ ಷರಾ ಬರೆಯುವುದು.

ಡಿ. ಕಂಡಿಕೆ (1) ರಂತೆ ತಯಾರಿಸಿದ ದಾಖಲೆಗಳಲ್ಲಿ ಉಳಿಕೆ ಗ್ರಾಮ ಮತ್ತು ಹೊಸ ಗ್ರಾಮಗಳಿಗೆ ಸೇರಿದ ಹಳೆಯ ಸರ್ವೆ ನಂ. ಗಳ ಬಾಬ್ತು ಗುಂಡು ಸುತ್ತಿ ಈಗ ಹೊಸದಾಗಿ ನೀಡಲಾದ ಸರ್ವೆ ನಂ. ಗಳನ್ನು ಕೆಂಪು ಮಸಿಯಿಂದ ದಾಖಲು ಮಾಡುವುದು.

ಇ. ಎರಡು ಗ್ರಾಮಗಳಿಗೆ ಪ್ರತ್ಯೇಕವಾಗಿ ತ್ರಿಪ್ರತಿ ಆಕಾರಬಂದು, ದ್ವಿಪ್ರತಿ ಅಟ್ಲಾಸ್‌ಗಳ ನಕಲುಗಳನ್ನು ತಯಾರಿಸಿ ದೃಢೀಕರಿಸಿ ತಾಲ್ಲೂಕು ಕಛೇರಿಯಲ್ಲಿಡತಕ್ಕದ್ದು ಹಾಗೂ ಹೊಸದಾಗಿ ತಯರಿಸಲ್ಪಟ್ಟ ಆಕಾರ ಬಂದುಗಳನ್ನು ಆಯಾ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಭೂ ಮಾಪನಾ ಉಪನಿರ್ದೇಶಕರವರು ಮೇಲು ಸಹಿ ಮಾಡತಕ್ಕದ್ದು.

ಎಫ್. ಹೊಸ ಗ್ರಾಮ ಹಾಗೂ ಉಳಿಕೆ ಮೂಲ ಗ್ರಾಮದ ಬಾಬ್ತು ಬದಲಾವಣೆಯಾದ ಸರ್ವೆ ನಂ. ಗಳನ್ನು ಸೂಚಿಸುವ ವಿವರವಾದ ಸಮನ್ವಯ ತಃಖ್ತೆಯನ್ನು ದ್ವಿಪ್ರತಿಯಲ್ಲಿ ತಯಾರಿಸಿ ಅದನ್ನು ತಹಶೀಲ್ದಾರರು/ ಭೂದಾಖಲೆಗಳ ಸಹಾಯಕ ನಿರ್ದೇಶಕರು ದೃಢೀಕರಿಸತಕ್ಕದ್ದು.

ಜಿ. ಯಾವುದೇ ಕಾರಣದಿಂದ ಮೂಲ ಗ್ರಾಮದ ದಾಖಲೆಗಳನ್ನು ವಿಭಜನೆ (ಪ್ರತ್ಯೇಕಿಸಿ) ಗೊಳಿಸತಕ್ಕದಲ್ಲ. ಹೊಸ ಹಾಗೂ ಉಳಿಕೆ ಮೂಲ ಗ್ರಾಮದ ಬಾಬ್ತು ಸರ್ವೆ ನಂ. ಗಳ ನಕಲುಗಳನ್ನು ಅಧಿಸೂಚನೆಯಂತೆ ತಯಾರಿಸಿ ದೃಢೀಕರಿಸಿ ಇಡತಕ್ಕದ್ದು.

ಭೂ ಮಾಪನ ಇಲಾಖೆಯು ಮೂಲ ಗ್ರಾಮ ಮತ್ತು ಹೊಸ ಗ್ರಾಮಕ್ಕೆ ಅಲಾಯಿದ ನಕ್ಷೆಗಳು, ಆಕಾರಬಂದ್ ಹಾಗೂ ಇತರೆ ಎಲ್ಲಾ ಸರ್ವೆ ದಾಖಲಾತಿಗಳನ್ನು ರೂಪಿಸಬೇಕು. ಹಾಗೆಯೇ ವಿಭಜನೆಗೊಂಡ ಸರ್ವೆ ನಂಬರ್‌ಗಳಿಗೆ ಪೋಡಿ ಮಾಡಿ ಗ್ರಾಮಠಾಣಾ ಮತ್ತು ಸರ್ವೆ ನಂಬರ್‌ನಲ್ಲಿ ಬಾಕಿ ಉಳಿಯುವ ಜಾಗಕ್ಕೆ ಪ್ರತ್ಯೇಕ ನಂಬರ್ ನೀಡಬೇಕು.

**(3) <u>ಸ್ಥಳೀಯ ಸಂಸ್ಥೆ (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ)</u>**

ಹೊಸದಾಗಿ ರಚನೆಯಾದ ಕಂದಾಯ ಗ್ರಾಮದ ವ್ಯಾಪ್ತಿ ಹೊಂದಿರುವ ಸ್ಥಳಿಯ ಸಂಸ್ಥೆಗಳು/ ಗ್ರಾಮ ಪಂಚಾಯತಿಗಳು ಗ್ರಾಮಠಾಣವಾಗಿ ಘೋಷಣೆಯಾದ ವಿಸ್ತೀರ್ಣದ ಜಾಗವನ್ನು ತಮ್ಮ ದಾಖಲೆಗಳಿಗೆ ತೆಗದುಕೊಳ್ಳಬೇಕು. ಅದರಲ್ಲಿ ಬರುವ ಸಾರ್ವಜನಿಕ ಆಸ್ತಿಗಳು, ಸರ್ಕಾರಿ ಆಸ್ತಿಗಳು, ಖಾಸಗಿ ಸ್ವತ್ತುಗಳು ಹಾಗೂ ಸ್ಥಳೀಯ ಸಂಸ್ಥೆಗೆ ಸೇರುವ ಆಸ್ತಿಗಳಿಗೆ ಪ್ರತ್ಯೇಕ ಖಾತೆಗಳನ್ನು ನೀಡಬೇಕು ಹಾಗೂ ಖಾಸಗಿ ಸ್ವತ್ತುಗಳ ಅಸೆಸ್‌ಮೆಂಟ್ ಮಾಡಿಸಿ ದಾಖಲೆ ನಿರ್ವಹಿಸಬೇಕು.

**(4) ತಾಂಡಾ/ವಾಲ್ಮೀಕಿ/ಅಂಬೇಡ್ಕರ್/ದೇವರಾಜ್‌ಅರಸ್ ಇತ್ಯಾದಿ ನಿಗಮಗಳು ಜಿಲ್ಲಾ ಪಂಚಾಯಿತಿ/ ಲೋಕೋಪಯೋಗಿ ಇಲಾಖೆ:**

ಹೊಸದಾಗಿ ರಚನೆಗೊಂಡ ಕಂದಾಯ ಗ್ರಾಮಗಳನ್ನು ಸಾರ್ವಜನಿಕರು ಮತ್ತು ಸ್ಥಳೀಯ ಆಡಳಿತಗಳ ಗಮನಕ್ಕೆ ತರಲು ಹಾಗೂ ಹೊಸ ಗ್ರಾಮದ ಹೆಸರನ್ನು ಜನಪ್ರಿಯಗೊಳಿಸಲು ಅದು ತಾಂಡಾ ಆಗಿದ್ದಲ್ಲಿ ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮದಿಂದ, ಹಟ್ಟಿ, ಹಾಡಿ, ಮಜರೆ ಇತ್ಯಾದಿಗಳಾಗಿದಲ್ಲಿ ಸಂಬಂಧಪಟ್ಟ ಅಭಿವೃದ್ಧಿ ನಿಗಮಗಳಿಂದ ಅಥವಾ ಸ್ಥಳೀಯ ಜಿಲ್ಲಾ ಪಂಚಾಯಿತಿಗಳಿಂದ ಗ್ರಾಮದ ನಾಮ ಫಲಕಗಳನ್ನು ಶಿಲಾ ರೂಪದಲ್ಲಿ ಮಾಡಿಸಿ ಹಾಕಿಸಬೇಕು. ಆ ವಸತಿ ಪ್ರದೇಶದಲ್ಲಿ ಸರ್ಕಾರಿ ಶಾಲೆ, ಆಸ್ಪತ್ರೆ, ಅಂಗನವಾಡಿ ಕೇಂದ್ರ ಇತ್ಯಾದಿ ಸಾರ್ವಜನಿಕ ಕಟ್ಟಡಗಳಿದ್ದಲ್ಲಿ ಅವುಗಳ ನಾಮ ಫಲಕಗಳಲ್ಲಿ ಆ ಗ್ರಾಮದ ಹೊಸ ಹೆಸರನ್ನು ಬರೆಸಲು ಲೋಕೋಪಯೋಗಿ ಇಲಾಖೆ ಅಥವಾ ಸಂಬಂಧಿತ ಇಲಾಖೆ ಕ್ರಮವಹಿಸಬೇಕು.

ಜಿಲ್ಲಾಧಿಕಾರಿಗಳು ಹೊಸ ಗ್ರಾಮ ರಚನೆಯ ಮಾಹಿತಿಯನ್ನು ಚುನಾವಣಾ ಆಯೋಗ, ಜನಗಣತಿ ನಿರ್ದೇಶನಾಲಯ ಮುಂತಾದ ಶಾಸನಬದ್ಧ ಪ್ರಾಧಿಕಾರಿಗಳಿಗೆ ಕಳಿಸಬೇಕು.

ಮೇಲ್ಕಂಡಂತಹ ದಾಖಲೆ ರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸುವಾಗ ಹಲವಾರು ರೀತಿಯ ಸವಾಲುಗಳು ಎದುರಾಗುತ್ತವೆ. ಸರ್ಕಾರಿ ಗೋಮಾಳಗಳಲ್ಲಿ, ಅರಣ್ಯ ಜಮೀನಿನಲ್ಲಿ, ಖಾಸಗಿ ಜಮೀನುಗಳಲ್ಲಿ, ಆ ವಸತಿ ಪ್ರದೇಶದಲ್ಲಿಯೇ ಇರುವ ಒಬ್ಬಿಬ್ಬರ ಖಾತೆಯ ಜಮೀನುಗಳಲ್ಲಿ ಇತರೆ ಸಂಘ ಸಂಸ್ಥೆಗಳು, ಸರ್ಕಾರಿ ಇಲಾಖೆಗಳು, ಖಾಸಗಿ ಮತ್ತು ಸಾರ್ವಜನಿಕ ಕಂಪನಿಗಳು, ಸ್ವಾಯತ್ತ ಸಂಸ್ಥೆ ಇತ್ಯಾದಿ ಸಂಸ್ಥೆಗಳ ಒಡೆತನದ ಜಮೀನುಗಳಲ್ಲಿ ತಲೆ ಎತ್ತಿರುವ ದಾಖಲೆ ರಹಿತ ಜನವಸತಿ ಪ್ರದೇಶಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಯಾವ ಕ್ರಮ ಕೈಗೊಳ್ಳಬೇಕೆಂಬುದರ ಬಗ್ಗೆ ಶ್ರೀ ಕೆ. ನರಸಿಂಹಯ್ಯ ಸಮಿತಿಯ ವರದಿಯಲ್ಲಿ ವಿವರಗಳಿದ್ದು ಅವುಗಳನ್ನು ಅವಲೋಕಿಸುವುದು.

**ಸಿ.ಪುಟ್ಟನಂಜಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ. (ಭೂಮಾಪನ)

P.R.246
SC-100

## ಸಹಕಾರ ಸಚಿವಾಲಯ

**ವಿಷಯ:** 2015-16ನೇ ಸಾಲಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣಕ್ಕಾಗಿ (Cleaning & Grading) ಯಂತ್ರೋಪಕರಣ ಪೂರೈಕೆ ಯೋಜನೆಯಡಿ ಅನುದಾನ ಬಿಡುಗಡೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಒ 145 ಸಿಎಲ್‌ಎಸ್ 2015, ದಿ:08.10.2015 ಹಾಗೂ ತಿದ್ದುಪಡಿ ಆದೇಶ ದಿ:19.12.2015,
2) ಸರ್ಕಾರಿ ಆದೇಶ ಸಂಖ್ಯೆ: ಸಿಒ 145 ಸಿಎಲ್‌ಎಸ್ 2015, ದಿ: 02.01.2016.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್: ಸಿಆರ್‌ಡಿ: ಕೆಎಂಇ-8:27:ಭಾಗ-2:2015-16, ದಿ: 25.01.2016.
4) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015 ದಿನಾಂಕ: 09.10.2015 ಮತ್ತು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ: 19.01.2016.

**ಪ್ರಸ್ತಾವನೆ:-**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ 2015-16ನೇ ಸಾಲಿಗೆ ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಗೆ ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣಕ್ಕಾಗಿ (Cleaning & Grading) ಯಂತ್ರೋಪಕರಣ ಪೂರೈಕೆ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಯೋಜನೆಯಡಿ ಯಂತ್ರೋಪಕರಣಗಳನ್ನು ಖರೀದಿಸಲು ರೂ. 1,02,01,492-00 ಮೊತ್ತದ ಅನುದಾನ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳ ಪೂರೈಕೆಗೆ ಸಂಬಂಧಿಸಿದಂತೆ ರಾಜ್ಯದ 15 ಜಿಲ್ಲೆಗಳಿಂದ ರೂ. 99.96.494.00 ಗಳ ಮೊತ್ತಕ್ಕೆ ಸಹಾಯಧನ ಕೋರಿ ಬಂದಿರುವ 98 ಪ್ರಸ್ತಾವನೆಗಳಿಗೆ 2ನೇ ಕಂತಿನ ಅನುದಾನ ಬಿಡುಗಡೆ ಮಾಡಿ ಆದೇಶ ಹೊರಡಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 145 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 06.02.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015-16ನೇ ಸಾಲಿನಲ್ಲಿ ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣ (Cleaning & Grading) ಯಂತ್ರೋಪಕರಣಗಳನ್ನು ಖರೀದಿಸಲು ಅನುಬಂಧದಲ್ಲಿ ತಿಳಿಸಿರುವ 15 ಜಿಲ್ಲೆಗಳ 98 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಪ್ರಸ್ತಾವೆಗಳಿಗೆ ಕಲಂ 6 ರಲ್ಲಿ ಸೂಚಿಸಿರುವ ರೂ. 99.96.494.00 ಮೊತ್ತವನ್ನು 2ನೇ ಕಂತನ್ನಾಗಿ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶದಲ್ಲಿ ಹಣ ಬಿಡುಗಡೆಯನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶಗಳು ಮತ್ತು ಅನುಬಂಧದಲ್ಲಿನ ಷರತ್ತುಗಳಿಗೊಳಪಟ್ಟು ಮಾಡತಕ್ಕದ್ದು.

ಆಯವ್ಯಯ "ಲೆಕ್ಕ ಶೀರ್ಷಿಕೆ 2425-00-001-0-01"ರಡಿ ಒದಗಿಸಲಾಗಿರುವ ರೂ.300.00 ಲಕ್ಷಗಳ ಬಾಕಿ ಇರುವ ರೂ. 1,97,98,508.00 ಗಳ ಪೈಕಿ ರೂ. 99.96,494.00 ಗಳನ್ನು ಈ ಕೆಳಕಂಡ ಷರತ್ತುಗಳೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಮೊತ್ತವನ್ನು ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಮೊತ್ತವನ್ನು ಡ್ರಾ ಮಾಡಿ, ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಜಿಲ್ಲಾ ಉಪ ನಿಬಂಧಕರುಗಳಿಗೆ ಹಣ ಬಿಡುಗಡೆ ಮಾಡುವುದು. ಈ ಹಣ ಬಳಕೆಯಾದ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಜಿಲ್ಲಾ ಉಪ ನಿಬಂಧಕರಿಂದ ಪಡೆದು ಸರ್ಕಾರಕ್ಕೆ ಸಲ್ಲಿಸುವುದು.

ಈ ಯೋಜನೆಯ ಅನುಷ್ಠಾನದ ಬಗ್ಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಉಸ್ತುವಾರಿವಹಿಸಿ ನಿರ್ವಹಿಸತಕ್ಕದ್ದು.

**ಷರತ್ತುಗಳು :-**

1. ಯಂತ್ರ ಸರಬರಾಜುದಾರರು ಸಂಘಕ್ಕೆ ಯಂತ್ರ ಸರಬರಾಜು ಮಾಡಿರುವುದನ್ನು ದೃಢಪಡಿಸಿಕೊಂಡು ಸಹಾಯಧನದ ಮೊತ್ತವನ್ನು ಬಿಡುಗಡೆ ಮಾಡತಕ್ಕದ್ದು.
2. ಯಂತ್ರ ಸರಬರಾಜು ಆದ 15 ದಿನಗಳೊಳಗಾಗಿ ಯಂತ್ರ ಉಪಯೋಗಿಸಿದ ಬಗ್ಗೆ ಸಂಘಗಳಿಂದ ದೃಢೀಕರಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
3. ಸಂಘಗಳು ಈ ಯಂತ್ರ ನಿರ್ವಹಣೆ ಲೆಕ್ಕವನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು.
4. ಸರ್ಕಾರ ಬಿಡುಗಡೆ ಮಾಡಲಾದ ಸಹಾಯಧನದ ಮೊತ್ತವನ್ನು ಸಂಘವು 'ಸರ್ಕಾರದ ಗ್ರೇಡಿಂಗ್ ಮತ್ತು ಕ್ಲೀನಿಂಗ್ ಅನುದಾನ" ಖಾತೆಯಲ್ಲಿ ಪ್ರತ್ಯೇಕವಾಗಿ ನಮೂದಿಸತಕ್ಕದ್ದು.
5. ಈ ಯಂತ್ರಗಳ ಆದಾಯದಲ್ಲಿ ಯಂತ್ರೋಪಕರಣ ಸವಕಳಿ ನಿಧಿ ಸೃಷ್ಟಿಸಿ ಪ್ರತ್ಯೇಕವಾಗಿ ಹಣ ಜಮಾ ಇಡತಕ್ಕದ್ದು.
6. ಮೇಲಿನ ಯಾವುದೇ ಷರತ್ತುಗಳನ್ನು ಸಂಘವು ಉಲ್ಲಂಘಿಸಿರುವುದು ಕಂಡು ಬಂದಲ್ಲಿ ಸರ್ಕಾರದಿಂದ ನೀಡಲಾದ ಸಹಾಯಧನ ಮೊತ್ತವನ್ನು ಒಂದೇ ಕಂತಿನಲ್ಲಿ ಹಿಂದಿರುಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 4 ಟಿಎಫ್‌ಪಿ 2015, ದಿನಾಂಕ: 09.10.2015 ಮತ್ತು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ: 19.1.2016ಗಳನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಹಕಾರ ಇಲಾಖೆ.

**ಅನುಬಂಧ**

ಸಂ ಸಿಒ 145 ಸಿಎಲ್‌ಎಸ್ 2015, ದಿ:06.02.2016

| ಕ್ರ. | ಜಿಲ್ಲೆಯ ಹೆಸರು | | ಸಹಕಾರ ಸಂಘದ ಹೆಸರು | ಯಂತ್ರಗಳ ವಿಧಗಳು | ಜಿಲ್ಲಾ ಸಮಿತಿಯಲ್ಲಿ ನಿಗದಿಪಡಿಸಿದ ಯಂತ್ರದ ಮೊತ್ತ | ಸರ್ಕಾರದ ಸಹಾಯಧನ ಶೇ. 50 ರಷ್ಟು ಅಥವಾ ರೂ. 3.00 ಲಕ್ಷದವರೆಗೆ ಮಾತ್ರ |
|---|---|---|---|---|---|---|
| **1** | **2** | | **3** | **4** | **5** | **6** |
| 1 | ಬೆಂಗಳೂರು ಗ್ರಾಮಾಂತರ ಜಿಲ್ಲೆ | 1 | ಗಾಂಧಿಗ್ರಾಮ ವ್ಯವಸಾಯ ಸೇವಾ ಸಹಕಾರ ಸಂಘ ನಿ, ನೆಲಮಂಗಲ | ರಾಗಿ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ, ರಾಗಿ ಹಿಟ್ಟು ಮಾಡುವ ಯಂತ್ರ | 150000 | 75000 |
| | | 2 | ಕಸಬಾ ವ್ಯವಸಾಯ ಸೇವಾ ಸಹಕಾರ ಸಂಘ, ನಿ, ದೇವನಹಳ್ಳಿ | ರಾಗಿ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ ರಾಗಿ ಹಿಟ್ಟು ಮಾಡುವ ಯಂತ್ರ | 150000 | 75000 |
| | | | | **ಒಟ್ಟು** | **300000** | **150000** |

| 1 | 2 | | 3 | 4 | 5 | 6 |
|---|---|---|---|---|---|---|
| 2 | ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ | 3 | ಬೆಟ್ಟಹಲಸೂರು ರೈತರ ಸೇವಾ ಸಹಕಾರ ಸಂಘ, ನಿ, | ರಾಗಿ ಶುದ್ಧೀಕರಣ ಯಂತ್ರ | 82000 | 41000 |
| | | 4 | ದಾಸನಪುರ ವ್ಯವಸಾಯ ಸೇವಾ ಸಹಕಾರ ಸಂಘ ನಿ, | ರಾಗಿ ಶುದ್ಧೀಕರಣ ಯಂತ್ರ | 82000 | 41000 |
| | | 5 | ಮಾರೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, | ರಾಗಿ ಶುದ್ಧೀಕರಣ ಯಂತ್ರ | 82000 | 41000 |
| | | 6 | ಚಿಕ್ಕಜಾಲ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಸಂಘ ನಿ, | ರಾಗಿ ಶುದ್ಧೀಕರಣ ಯಂತ್ರ | 82000 | 41000 |
| | | 7 | ಬಂಡಿಕೊಡಿಗೇಹಳ್ಳಿ ರೈತರ ಸೇವಾ ಸಹಕಾರ ಸಂಘ ನಿ, | ರಾಗಿ ಶುದ್ಧೀಕರಣ ಯಂತ್ರ | 82000 | 41000 |
| | | | | **ಒಟ್ಟು** | **410000** | **205000** |
| 3 | ತುಮಕೂರು | 8 | ಬೆಟ್ಟದಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಗುಬ್ಬಿ ತಾಲ್ಲೂಕು | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | 9 | ಹಾಗಲವಾಡಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಗುಬ್ಬಿ ತಾಲ್ಲೂಕು | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | 10 | ಕೋರಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ತುಮಕೂರು ತಾಲ್ಲೂಕು | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | 11 | ಮಂಗಳವಾಡ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಪಾವಗಡ ತಾಲ್ಲೂಕು | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | 12 | ವಡ್ಡಗೆರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಕೊರಟಗೆರೆ ತಾಲ್ಲೂಕು | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | 13 | ಚೇಳೂರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಗುಬ್ಬಿ ತಾಲ್ಲೂಕು | ತೆಂಗು ಸುಲಿಯುವ ಯಂತ್ರ | 136000 | 68000 |
| | | | | ಅಡಿಕೆ ಸುಲಿಯುವ ಯಂತ್ರ | 242650 | 121325 |
| | | | | **ಒಟ್ಟು** | **1591900** | **795950** |
| 4 | ಕೋಲಾರ | 14 | ವ್ಯವಸಾಯ ಸೇವಾ ಸಹಕಾರ ಸಂಘ ನಿ, ಹುಲಿಬೆಲೆ, ಬಂಗಾರಪೇಟೆ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 87500 | 43750 |
| | | 15 | ವ್ಯವಸಾಯ ಸೇವಾ ಸಂಘ ನಿ, ಬಲಮುಂದೆ, ಬಂಗಾರಪೇಟೆ ತಾಲ್ಲೂಕು. | ರಾಗಿ ಶುದ್ಧೀಕರಣ ಯಂತ್ರ | 87500 | 43750 |
| | | 16 | ವ್ಯವಸಾಯ ಸೇವಾ ಸಹಕಾರ ಸಂಘ ನಿ, ಚಿಕ್ಕಕಂಡಹಳ್ಳಿ ಬಂಗಾರಪೇಟೆ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 87500 | 43750 |
| | | 17 | ವ್ಯವಸಾಯ ಸೇವಾ ಸಹಕಾರ ಸಂಘ ನಿ, ಹುಣಸನಹಳ್ಳಿ, ಬಂಗಾರಪೇಟೆ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 87500 | 43750 |
| | | 18 | ವ್ಯವಸಾಯ ಸೇವಾ ಸಹಕಾರ ಸಂಘ, ನಿ, ಹುದಕುಳ, ಬಂಗಾರಪೇಟೆ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 87500 | 43750' |
| | | | | **ಒಟ್ಟು** | **437500** | **218750** |
| 5 | ಚಿಕ್ಕಬಳ್ಳಾಪುರ | 19 | ಪ್ರಾಥಮಿಕ ಕೃಷಿ ಪತ್ತಿನ ಸೇವಾ ಸಹಕಾರ ಸಂಘ., ನಿ, ಆಗಲಗುರ್ಕಿ, ಚಿಕ್ಕಬಳ್ಳಾಪುರ ತಾಲ್ಲೂಕು | ಆಹಾರ ಧಾನ್ಯಗಳ ರಾಗಿ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |
| | | 20 | ಗೂಳೂರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬಾಗೇಪಲ್ಲಿ ತಾಲ್ಲೂಕು | ಆಹಾರ ಧಾನ್ಯಗಳ ರಾಗಿ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |
| | | 21 | ಕೃಷಿ ಹುಟ್ಟುವಳಿ ಸಂಸ್ಕರಣ ಮಾರಾಟ ಸಹಕಾರ ಸಂಘ, ಜರಬಂಡಹಳ್ಳಿ, ಗೌರಿಬಿದನೂರು ತಾಲ್ಲೂಕು | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |
| | | 22 | ಕಾಚಮಾಚನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಗೌರಿಬಿದನೂರು ತಾಲ್ಲೂಕು | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |

| 1 | 2 | | 3 | 4 | 5 | 6 |
|---|---|---|---|---|---|---|
| | | 23 | ಬಾದಿಮರಳೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ, ಗೌರಿಬಿದನೂರು ತಾಲ್ಲೂಕು | ಆಹಾರ ಧಾನ್ಯಗಳ ಶುದ್ದೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |
| | | 24 | ಚಂದನದೂರು ವ್ಯವಸಾಯ ಸೇವಾ ಸಹಕಾರ ಸಂಘ ನಿ, ಗೌರಿಬಿದನೂರು ತಾಲ್ಲೂಕು | ಆಹಾರ ಧಾನ್ಯಗಳ ಶುದ್ದೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳು | 148000 | 74000 |
| | | | | **ಒಟ್ಟು** | **888000** | **444000** |
| 6 | ಚಿತ್ರದುರ್ಗ | 25 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಧರ್ಮಪುರ, ಹಿರಿಯೂರು ತಾ | ಮೆಕ್ಕೆಜೋಳ ಯಂತ್ರ | 183800 | 91900 |
| | | 26 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಬಹದ್ದೂರಘಟ್ಟ, | ಮೆಕ್ಕೆಜೋಳ ಯಂತ್ರ | 183800 | 91900 |
| | | 27 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ದೊಡ್ಡಗನಾಳ್ ಚಳ್ಳಕೆರೆ ತಾ | ಮೆಕ್ಕೆಜೋಳ ಯಂತ್ರ | 183800 | 91900 |
| | | 28 | ಎನ್. ದೇವರಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಚಳ್ಳಕೆರೆ ತಾಲ್ಲೂಕು | ಮೆಕ್ಕೆಜೋಳ ಯಂತ್ರ | 183800 | 91900 |
| | | 29 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ರಾಂಪುರ | ಒಕ್ಕಣೆ ಯಂತ್ರ | 183800 | 91900 |
| | | 30 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ನಾಗಸಮುದ್ರ | ಒಕ್ಕಣೆ ಯಂತ್ರ | 183800 | 91900 |
| | | 31 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ತುಮಕೂರ್ಲಹಳ್ಳಿ | ಒಕ್ಕಣೆ ಯಂತ್ರ | 183800 | 91900 |
| | | 32 | ಗರಗ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಹೊಸದುರ್ಗ ತಾ, ಚಿತ್ರದುರ್ಗ ಜಿಲ್ಲೆ | ಬಹು ಬೆಳೆ ಒಕ್ಕಣೆ ಯಂತ್ರ | 183800 | 91900 |
| | | 33 | ಬಿ. ಚಿಕ್ಕಬೆನ್ನೂರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಚಿತ್ರದುರ್ಗ ತಾ ಮತ್ತು ಜಿಲ್ಲೆ | ಬಹು ಬೆಳೆ ಒಕ್ಕಣೆ ಯಂತ್ರ | 183800 | 91900 |
| | | | | **ಒಟ್ಟು** | **1654200** | **827100** |
| **7** | **ಮಂಡ್ಯ** | 34 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಚಾಮನಹಳ್ಳಿ, ಮದ್ದೂರು ತಾ | ಬಹು ಬೆಳೆ ಒಕ್ಕಣೆ ಯಂತ್ರ | 169,920 | 84,960 |
| | | 35 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಡಿ. ಹಲಸಹಳ್ಳಿ, ಮಳವಳ್ಳಿ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 77,000 | 38,500 |
| | | 36 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಕಲ್ಕುಣಿ, ಮಳವಳ್ಳಿ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 77,000 | 38,500 |
| | | 37 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಚಿಕ್ಕಾಯರಹಳ್ಳಿ, ಪಾಂಡವಪುರ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ ಹಾರ್ವೆಸ್ಟರ್/ರೀಪರ್, ತೆಂಗಿನ ಕಾಯಿ ಸಿಪ್ಪೆ ಸುಲಿಯುವ ಯಂತ್ರ | 418,100 | 209,050 |
| | | 38 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ನ್ಯಾಮನಹಳ್ಳಿ, ಪಾಂಡವಪುರ ತಾಲ್ಲೂಕು | ರಾಗಿ ಶುದ್ಧೀಕರಣ, ಹಾರ್ವೆಸ್ಟರ್/ರೀಪರ್ | 184,100 | 92,050 |
| | | 39 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಪೀ ಹಳ್ಳಿ ಶ್ರೀರಂಗಪಟ್ಟಣ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ, ಹಾರ್ವೆಸ್ಟರ್/ ರೀಪರ್, ತೆಂಗಿನಕಾಯಿ ಸಿಪ್ಪೆ ಸುಲಿಯುವ ಯಂತ್ರ | 418100 | 2090.50 |
| | | 40 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಅರಕೆರೆ ಶ್ರೀರಂಗಪಟ್ಟಣ ತಾಲ್ಲೂಕು. | ರಾಗಿ ಶುದ್ಧೀಕರಣ ಯಂತ್ರ ಹಾರ್ವೆಸ್ಟರ್ /ರೀಪರ್ | 184,100 | 92,050 |

| 1 | 2 | | 3 | 4 | 5 | 6 |
|---|---|---|---|---|---|---|
| | | 41 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಮೇಳಾಪುರ, ಶ್ರೀರಂಗಪಟ್ಟಣ ತಾಲ್ಲೂಕು. | ರಾಗಿ ಶುದ್ಧೀಕರಣ ಯಂತ್ರ, ಹಾರ್ವೆಸ್ಟರ್ / ರೀಪರ್ | 184,100 | 92,050 |
| | | 42 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ದೊಡ್ಡಪಾಳ್ಯ ಶ್ರೀರಂಗಪಟ್ಟಣ ತಾಲ್ಲೂಕು. | ರಾಗಿ ಶುದ್ಧೀಕರಣ ಯಂತ್ರ, ಹಾರ್ವೆಸ್ಟರ್ / ರೀಪರ್ | 184,100 | 92,050 |
| | | 43 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಅಕ್ಕಿಹೆಬ್ಬಾಳು, ಕೆ.ಆರ್.ಪೇಟೆ ತಾಲ್ಲೂಕು. | ಬಹುಬೆಳೆ ಒಕ್ಕಣೆ ಯಂತ್ರ (ಎರಡಕ್ಕೆ) | 339840 | 169920 |
| | | 44 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕಿಕ್ಕೇರಿ, ಕೆ.ಆರ್.ಪೇಟೆ ತಾಲ್ಲೂಕು. | ತೆಂಗಿನಕಾಯಿ ಸಿಪ್ಪೆ ಸುಲಿಯುವ ಯಂತ್ರ | 234000 | 117000 |
| | | 45 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಸಂತೇಬಾಚಹಳ್ಳಿ, ಕೆ.ಆರ್ ಪೇಟೆ ತಾಲ್ಲೂಕು. | ತೆಂಗಿನಕಾಯಿ ಸಿಪ್ಪೆ ಸುಲಿಯುವ ಯಂತ್ರ | 234000 | 117000 |
| | | 46 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಸುಜ್ಜಲೂರು, ಮಳವಳ್ಳಿ ತಾಲ್ಲೂಕು. | ರಾಗಿ ಶುದ್ಧೀಕರಣ, ಬಹು ಬೆಳೆ ಒಕ್ಕಣೆ ಯಂತ್ರ | 246920 | 123460 |
| | | | | **ಒಟ್ಟು** | **2,951,280** | **1,475,640** |
| 8 | ಕೊಡಗು | 47 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಹಾತೂರು, ವಿರಾಜಪೇಟೆ ತಾಲ್ಲೂಕು. ಕೊಡಗು | ಕಾಫಿ/ ಪೆಪ್ಪರ್ ಫ್ರೀ ಕ್ಲೀನರ್ ಮತ್ತು ಗ್ರೇಡರ್ | 112000 | 56000 |
| | | | | **ಒಟ್ಟು** | 112.000 | 56.000 |
| 9 | ಮೈಸೂರು | 48 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಬಿಳಿಕೆರೆ, ಹುಣಸೂರು ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 337315 | 168658 |
| | | 49 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಹೆಚ್.ಡಿ ಕೋಟೆ ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 251860 | 151930 |
| | | 50 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಶ್ರೀರಾಂಪುರ, ಮೈಸೂರು ತಾಲ್ಲೂಕು | ಕಬ್ಬು ಅರೆಯುವ ಯಂತ್ರ | 32000 | 16000 |
| | | 51 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಅಂತರ ಸಂತೆ, ಹೆಚ್.ಡಿ. ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ | ರಾಗಿ ಶುದ್ಧೀಕರಣ ಯಂತ್ರ | 251860 | 151930 |
| | | 52 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಕೆಂಪಿ ಸಿದ್ದನಹುಂಡಿ, ನಂಜನಗೂಡು ತಾಲ್ಲೂಕು | ರಾಗಿ ಶುದ್ಧೀಕರಣ ಯಂತ್ರ | 337315 | 168658 |
| | | 53 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಹುಲ್ಲಹಳ್ಳಿ, ನಂಜನಗೂಡು ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 169920 | 84960 |
| | | 54 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಯಾಚೇನಹಳ್ಳಿ ಟಿ. ನರಸೀಪುರ ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 450.000 | 225000 |
| | | 55 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಆಲನಹಳ್ಳಿ, ಹೆಚ್.ಡಿ. ಕೋಟೆ ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 450.000 | 225000 |
| | | 56 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಮಾದಾಪುರ, ಹೆಚ್.ಡಿ. ಕೋಟೆ ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 450.000 | 225000 |
| | | 57 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಮುಳ್ಳೂರು, ಹೆಚ್.ಡಿ. ಕೋಟೆ ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 169920 | 84960 |
| | | 58 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ನಾಗನಹಳ್ಳಿ, ಹೆಚ್.ಡಿ. ಕೋಟೆ. ತಾಲ್ಲೂಕು. | ಬಹು ಬೆಳೆ ಒಕ್ಕಣೆ ಯಂತ್ರ | 450.000 | 225000 |
| | | 59 | ಧರ್ಮಾಪುರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ಧರ್ಮಾಪುರ, ಹುಣಸೂರು ತಾ. | ರಾಗಿ ಶುದ್ಧೀಕರಣ | 337.315 | 168658 |
| | | | | **ಒಟ್ಟು** | **3687505** | **1895754** |
| 10 | ಗದಗ | 60 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಲ್ಲಾಪೂರ ತಾ. ರೋಣ | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |

| 1 | 2 | | 3 | 4 | 5 | 6 |
|---|---|---|---|---|---|---|
| | | 61 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಂಕದಾಳ ತಾ. ನರಗುಂದ. | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | 62 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸೊರಟೂರ ತಾ. ಗದಗ | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | 63 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಅಂತೂರ ತಾ. ಗದಗ. | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | 64 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗೊಜನೂರ ತಾ. ಶಿರಹಟ್ಟಿ | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | 65 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಆಡರಕಟ್ಟಿ ತಾ, ಶಿರಹಟ್ಟಿ | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | 66 | ಕಸಬಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ನರಗುಂದ ತಾ ನರಗುಂದ. | ಬಹು ಬೆಳೆ ಒಕ್ಕಣೆ ಯಂತ್ರ | 167800 | 83900 |
| | | | | **ಒಟ್ಟು** | **1174600** | **587300** |
| 11 | ಹಾವೇರಿ | 67 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೆರಿಮಲ್ಲಾಪೂರ ತಾ. ರಾಣಿಬೆನ್ನೂರ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 68 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಿರೇಕೆರೂರು ತಾ, ಹಿರೇಕೆರೂರ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 69 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಂಸಭಾವಿ ತಾ. ಹಿರೇಕೆರೂರ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 70 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹುಲಗೂರ ತಾ. ಶಿಗ್ಗಾಂವಿ. | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 71 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೂವಿನಶಿಗ್ಗಿ ತಾ. ಸವಣೂರ. | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 72 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಂಚಾರಗಟ್ಟಿ, ತಾ ಹಾವೇರಿ. | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 73 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗುತ್ತಲ ತಾ. ಹಾವೇರಿ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 74 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ, ತೆವರಮಳ್ಳಿಹಳ್ಳಿ ತಾ. ಸವಣೂರ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 75 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಾಕೋಳ ತಾ. ರಾಣೇಬೆನ್ನೂರ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 76 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಖುರ್ದ ಕೋಡಿಹಳ್ಳಿ ತಾ. ಬ್ಯಾಡಗಿ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 77 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಿರೇಬೆಂಡಿಗೇರಿ ತಾ. ಶಿಗ್ಗಾಂವಿ | ಬಹು ಬೆಳೆ ಒಕ್ಕಣೆ ಯಂತ್ರ | 168000 | 84000 |
| | | 78 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೊಸಪೇಟೆ ತಾ. ಹಾನಗಲ್, ಹಾವೇರಿ ಜಿಲ್ಲೆ | ಜೋಳ ಗೋವಿನಜೋಳ ಮಾಡುವ/ ಶುದ್ಧೀಕರಿಸುವ ಯಂತ್ರ | 168000 | 84000 |
| | | 79 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಚಿಕ್ಕಾಂಶಿ ಹೊಸೂರ ತಾ. ಹಾನಗಲ್, ಹಾವೇರಿ ಜಿಲ್ಲೆ. | ಜೋಳ ಗೋವಿನಜೋಳ ಮಾಡುವ/ಶುದ್ಧೀಕರಿಸುವ ಯಂತ್ರ | 168000 | 84000 |
| | | 80 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೊಸಶಿಡೇನೂರ ತಾ. ಬ್ಯಾಡಗಿ, ಹಾವೇರಿ ಜಿಲ್ಲೆ. | ಜೋಳ ಗೋವಿನಜೋಳ ಮಾಡುವ/ಶುದ್ಧೀಕರಿಸುವ ಯಂತ್ರ | 168000 | 84000 |
| | | | | **ಒಟ್ಟು** | 2352000 | 1176000 |

| 1 | 2 | | 3 | 4 | 5 | 6 |
|---|---|---|---|---|---|---|
| 12 | ಕಲಬುರಗಿ | 81 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಅಂದೋಲ ತಾ. ಜೇವರ್ಗಿ | ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 300000 | 150000 |
| | | 82 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಅಂಕಲಗಾ ಕೇ.ಕ. ಕುರಿಕೋಟಾ ತಾ. ಕಲಬುರಗಿ | ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 300000 | 150000 |
| | | 83 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಚಿಂತಪಳ್ಳಿ ತಾ ಚಿಂಚೋಳಿ | ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 300000 | 150000 |
| | | 84 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ನಾಲವಾರ ತಾ. ಚಿತ್ತಾಪೂರ | ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 300000 | 150000 |
| | | 85 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಕೊಲ್ಲುರ ತಾ ಚಿತ್ತಾಪೂರ | ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 300000 | 150000 |
| | | | | **ಒಟ್ಟು** | **1500000** | **750000** |
| 13 | ಬೀದರ್ | 86 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಜನವಾಡ | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣ | 293500 | 146750 |
| | | 87 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಕಮಲನಗರ | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣ | 293500 | 146750 |
| | | 88 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಮುಡಬಿ | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣ | 293500 | 146750 |
| | | 89 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಗೋಟಾಳಾ | ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣ | 293500 | 146750 |
| | | | | **ಒಟ್ಟು** | **1174000** | **587000** |
| 14 | ಬಳ್ಳಾರಿ | 90 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಬಬ್ಬೈಲುವದ್ದಿಗೇರಿ ತಾ. ಹೊಸಪೇಟೆ | ಆಹಾರ ಧಾನ್ಯಗಳ ಒಕ್ಕಣೆ ಶುದ್ಧೀಕರಣ ಯಂತ್ರ | 184000 | 92000 |
| | | 91 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಪಾಪಿನಾಯಕನಹಳ್ಳಿ ತಾ. ಹೊಸಪೇಟೆ | ಆಹಾರ ಧಾನ್ಯಗಳ ಒಕ್ಕಣೆ ಶುದ್ಧೀಕರಣ ಯಂತ್ರ | 184000 | 92000 |
| | | 92 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಚಿಲಕನಹಟ್ಟಿ ತಾ. ಹೊಸಪೇಟೆ | ಆಹಾರ ಧಾನ್ಯಗಳ ಒಕ್ಕಣೆ ಶುದ್ಧೀಕರಣ ಯಂತ್ರ | 184000 | 92000 |
| | | 93 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಉತ್ತಂಗಿ ತಾ. ಹೂವಿನಹಡಗಲಿ | ಆಹಾರ ಧಾನ್ಯಗಳ ಒಕ್ಕಣೆ ಶುದ್ಧೀಕರಣ ಯಂತ್ರ | 184000 | 92000 |
| | | | | **ಒಟ್ಟು** | **736000** | **368000** |
| 15 | ಕೊಪ್ಪಳ | 94 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಸಿದ್ದಾಪುರ, ಗಂಗಾವತಿ ತಾ. ಕೊಪ್ಪಳ ಜಿಲ್ಲೆ | ಆಹಾರ ಧಾನ್ಯ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 184000 | 92000 |
| | | 95 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಮೇಣೆಧಾಳ ಕುಷ್ಠಗಿ ತಾ. ಕೊಪ್ಪಳ ಜಿಲ್ಲೆ | ಆಹಾರ ಧಾನ್ಯ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 184000 | 92000 |
| | | 96 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ವಜ್ರಬಂಡಿ, ಯಲಬುರ್ಗಾ ತಾ. ಕೊಪ್ಪಳ ಜಿಲ್ಲೆ. | ಆಹಾರ ಧಾನ್ಯ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 184000 | 92000 |
| | | 97 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಯರಗೇರಾ, ಕುಷ್ಠಗಿ ತಾ. ಕೊಪ್ಪಳ ಜಿಲ್ಲೆ | ಆಹಾರ ಧಾನ್ಯ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 184000 | 92000 |
| | | 98 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ, ಹೊಸಹಳ್ಳಿ, ಕೊಪ್ಪಳ ತಾ, ಕೊಪ್ಪಳ ಜಿಲ್ಲೆ | ಆಹಾರ ಧಾನ್ಯ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರ | 184000 | 92000 |
| | | | | **ಒಟ್ಟು** | **920000** | **460000** |
| | | | | **ಒಟ್ಟು** | **19888985** | **9996494** |

**P.R.183**
**S.C.50**

**ಕೆ. ರಾಧಾಕೃಷ್ಣ ,**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ರೇಷ್ಮೆ ಹುಳು ಬಿತ್ತನೆ, ರೇಷ್ಮೆ ಗೂಡು ಮತ್ತು ರೇಷ್ಮೆ ನೂಲು (ಉತ್ಪಾದನೆ, ಸರಬರಾಜು, ವಿತರಣೆ ಮತ್ತು ಮಾರಾಟ ನಿಯಂತ್ರಣ) ಕಾಯಿದೆ 1959ರ ಸೆಕ್ಷನ್ 10A(1)(b) ರನ್ವಯ ಮಾರುಕಟ್ಟೆ ಸಮಿತಿಗಳನ್ನು ರಚಿಸಿ ಹಾಗೂ ಸದರಿ ನಿಯಮಾವಳಿಯ ನಿಯಮ 16 ರನ್ವಯ ಮಾರುಕಟ್ಟೆ ಸಮಿತಿಗಳಿಗೆ ರೇಷ್ಮೆ ಬೆಳೆಗಾರರ ಪ್ರತಿನಿಧಿಗಳು ಮತ್ತು ರೇಷ್ಮೆ ನೂಲು ಬಿಚ್ಚುವವರ ಪ್ರತಿನಿಧಿಗಳನ್ನು ಅನುಬಂಧದಲ್ಲಿರುವಂತೆ ಮಾರುಕಟ್ಟೆ ಸಮಿತಿಯ ಸದಸ್ಯರುಗಳನ್ನಾಗಿ ಹಾಗೂ ಸದರಿ ನಿಯಮಾವಳಿಯ ನಿಯಮ 16(2)ರನ್ವಯ ಸದಸ್ಯತ್ವದ ಅವಧಿಯನ್ನು 03 ವರ್ಷಗಳ ಅವಧಿಗೆ ಇಲ್ಲವಾದರೆ ಸದಸ್ಯರ ಮರಣ/ವಜಾ/ರಾಜೀನಾಮೆಯಿಂದ ಸದಸ್ಯತ್ವ ರದ್ದಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಲ್. ಚಿನ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ),
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 58 ರೇಕೃವಿ 2015, ಬೆಂಗಳೂರು, ದಿನಾಂಕ : 06–02–2016ಕ್ಕೆ ಅನುಬಂಧ**

| ಕ್ರಮ ಸಂ | ಅಧ್ಯಕ್ಷರು | ರೇಷ್ಮೆಬೆಳೆಗಾರರ ಪ್ರತಿನಿಧಿಗಳು ಶ್ರೀ/ಶ್ರೀಮತಿ | ರೇಷ್ಮೆ ನೂಲು ಬಿಚ್ಚುವವರ ಪ್ರತಿನಿಧಿಗಳು ಶ್ರೀ/ಶ್ರೀಮತಿ |
|---|---|---|---|
| 1 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಶಿಡ್ಲಘಟ್ಟ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಎಂ.ಜಗದೀಶ್ ಬಿನ್ ಮುನಿಯಪ್ಪ ಮಳಮಾಚನಹಳ್ಳಿ, ಶಿಡ್ಲಘಟ್ಟ ತಾಲ್ಲೂಕು | ಜಿ. ರೆಹಮಾನ್ ಬಿನ್ ಗೌಸ್ ಪೀರ್ ಖಾಸಿಂ ಪಾಳ್ಯ ಶಿಡ್ಲಘಟ್ಟ. |
| | | ದೇವರಾಜು ಬಿನ್ ಶಂಕರಪ್ಪ, ತಲದಮ್ಮನ ಹಳ್ಳಿ, ಶಿಡ್ಲಘಟ್ಟ ತಾ. | ಎನ್. ರಾಮಚಂದ್ರಪ್ಪ ಬಿನ್ ನಾರಾಯಣಪ್ಪ, ಸಿದ್ದಾರ್ಥನಗರ, ಶಿಡ್ಲಘಟ್ಟ. |
| | | | ಕೆ.ವಿ. ಅನಂತ ಪದ್ಮನಾಭ ಬಿನ್ ಕೆ. ವೆಂಕಟಸ್ವಾಮಿ, ದೇಶದ ಪೇಟೆ, ಶಿಡ್ಲಘಟ್ಟ. |
| 2 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕನಕಪುರ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಶ್ರೀ ನಾರಾಯಣ ಗೌಡ ಬಿನ್ ಸಂಜೀವೆಗೌಡ, ತಾವರಗಟ್ಟೆ ಕನಕಪುರ ತಾಲ್ಲೂಕು | ಸೈಯದ್ ಅಜೀಂ ಬಿನ್ ಸೈಯದ್ ಅಕ್ಬರ್, ಮಳೆಕೋಟೆ ಕನಕಪುರ. |
| | | ಶ್ರೀ ಎಂ.ಡಿ. ವಿಜಯದೇವ ಬಿನ್ ದೇವೆಗೌಡ, ಮಾರುಳೆಬೇಕುಪ್ಪೆ, ಉಯ್ಯಂಬಳ್ಳಿ ಹೋಬಳಿ, ಕನಕಪುರ | ಕೆ. ರಾಮಣ್ಣ ಬಿನ್ ಕುನ್ನಯ್ಯ, ಹಲಸಿನಮರದ ದೊಡ್ಡಿ, ಕನಕಪುರ. |
| | | | ಎಂ.ಎನ್. ಚಂದ್ರಶೇಖರ್ ಮಳಗಾಳು, ಕನಕಪುರ. |
| 3 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೊಳ್ಳೇಗಾಲ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ರವಿ ಬಿನ್ ಕುಳ್ಳಯ್ಯ ಕುಂಟನ ದೊಡ್ಡಿ ಗ್ರಾಮ, ಮಳವಳ್ಳಿ ತಾಲ್ಲೂಕು, ಮಂಡ್ಯ | ಶಿವಣ್ಣ ಬಿನ್ ಹೊನ್ನಯ್ಯ ಕಾಮಗೆರೆ, ಕೊಳ್ಳೇಗಾಲ ತಾಲ್ಲೂಕು. |
| | | ರಾಮಣ್ಣ ನಾಯ್ಡು ಬಿನ್ ವೆಂಕಟರಮಣ ನಾಯ್ಡು, ಉದ್ದನೂರು ಗ್ರಾಮ, ಕೊಳ್ಳೇಗಾಲ ಚಾಮರಾಜನಗರ ಜಿಲ್ಲೆ | ವೆಂಕಟ ಶೆಟ್ಟಿ ಬಿನ್ ಕುಳ್ಳ ಶೆಟ್ಟಿ, ಹೊನ್ನೂರು, ಯಳಂದೂರು ತಾಲ್ಲೂಕು. |
| | | | ಫಜಲ್ ಖಾನ್ ಬಿನ್ ಅಹ್ಮದ್ ಖಾನ್, ಕಣ್ಣೂರು, ಕೊಳ್ಳೇಗಾಲ ತಾಲ್ಲೂಕು. |
| 4 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ವಿಜಯಪುರ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಕಲ್ಯಾಣ್ ಕುಮಾರ್ ಬಿನ್ ಮಕ್ರಪ್ಪ ಹರಳೂರು ನಾಗೇನಹಳ್ಳಿ, ವಿಜಯಪುರ ಹೋಬಳಿ, ದೇವನಹಳ್ಳಿ ತಾಲ್ಲೂಕು. | ಸಾದಿಕ್ ಪಾಷ ಬಿನ್ ಮುಸ್ತಕ್ ಅಹ್ಮದ್, ದರ್ಗಾಮೊಹಲ್ಲ, ವಿಜಯಪುರ. |
| | | ಎಂ. ಬಸವರಾಜು, ಬಿನ್ ಹೆಚ್. ಮುನಿಯಪ್ಪ, ಧರ್ಮಪುರ, ವಿಜಯಪುರ. | ಅಕ್ರಂ ಪಾಷ ಬಿನ್ ಅಮೀರ್ ಖಾನ್, ಯಲುವಳ್ಳಿ ರಸ್ತೆ, ವಿಜಯಪುರ, ದೇವನಹಳ್ಳಿ ತಾಲ್ಲೂಕು. |
| | | | ವಿ. ದೇವರಾಜಯ್ಯ ಬಿನ್ ವೆಂಕಟಮುನಿಯಪ್ಪ, ಮಂಡಿಬೆಲೆ ರಸ್ತೆ, ವಿಜಯಪುರ, ದೇವನಹಳ್ಳಿ ತಾಲ್ಲೂಕು. |
| 5 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಚನ್ನಪಟ್ಟಣ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ದೇವರಾಜು ಬಿನ್ ಚಿಕ್ಕಮಾಸ್ತಿಗೌಡ ಎಸ್.ಪಾಳ್ಯ, ಚನ್ನಪಟ್ಟಣ. | ಶ್ರೀನಿವಾಸ್ ಬಿನ್ ಹನುಮಯ್ಯ, ಚನ್ನಪಟ್ಟಣ ಟೌನ್. |
| | | ಜಗದೀಶ್ ಬಿನ್ ಅಡವಿಯಪ್ಪ, ಬೇವೂರು, ಚನ್ನಪಟ್ಟಣ. | ಜಾಸ್ಮಿನ್ ಪಾಷ ಬಿನ್ ಅಕ್ಬರ್ ಪಾಷ, ಹೊಂಗನೂರು. |
| | | ಶ್ರೀ ಸ್ವಾಮಿ ಬಿನ್ ಬಸವಲಿಂಗಯ್ಯ, ಸಿ.ವಿ. ಹಳ್ಳಿ, ಚನ್ನಪಟ್ಟಣ | ಶ್ರೀ ಅಹಮ್ಮದ್ ಖಾನ್ ಬಿನ್ ಹೈದರ್ ಖಾನ್, ಸೈಯದ್‌ವಾಡಿ, ಚನ್ನಪಟ್ಟಣ ಟೌನ್. |

| | | | |
|---|---|---|---|
| 6 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಚಿಂತಾಮಣಿ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಕೆಂಪರೆಡ್ಡಿ ಬಿನ್ ಬಚ್ಚರೆಡ್ಡಿ, ಬಿಸಲಹಳ್ಳಿ, ಚಿಂತಾಮಣಿ ತಾಲ್ಲೂಕು. | ರಾಜಗೋಪಾಲ ರೆಡ್ಡಿ ಬಿನ್ ಮುನಿಶ್ಯಾಮಪ್ಪ, ವೆಂಕಟಗಿರಿಕೋಟೆ, ಚಿಂತಾಮಣಿ. |
| | | ಮಂಜುನಾಥ ಬಿನ್ ಕೃಷ್ಣಪ್ಪ, ಗುನ್ನಹಳ್ಳಿ, ಕೈವಾರ ಹೋಬಳಿ, ಚಿಂತಾಮಣಿ ತಾಲ್ಲೂಕು. | ಆರ್. ರಿಯಾಜ್ ಖಾನ್ ಬಿನ್ ರಸೂಲ್ ಖಾನ್, ವೆಂಕಟಗಿರಿಕೋಟೆ, ಚಿಂತಾಮಣಿ ತಾಲ್ಲೂಕು. |
| | | | ತುಫೇಲ್ ಖಾನ್ ಬಿನ್ ವಹಾಬ್ ಖಾನ್, ಚಿನ್ನಸಂದ್ರ, ಚಿಂತಾಮಣಿ ತಾಲ್ಲೂಕು. |
| 7 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಶ್ರೀನಿವಾಸಪುರ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಪಿ.ವಿ. ಆಂಜನಪ್ಪ ಬಿನ್ ವೆಂಕಟರಮಣಪ್ಪ, ಪಾತ ಮುತ್ತಪ್ಪಲ್ಲಿ, ಯಲ್ದೂರು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು. | ಟಿ. ಶಬ್ಬೀರ್ ಬಿನ್ ಅಬ್ದುಲ್ ಕಲೀಲ್, ಜಾಕಿರ್ ಹುಸೇನ್ ಮೊಹಲ್ಲ, ಶ್ರೀನಿವಾಸಪುರ. |
| | | ರಾಮಕೃಷ್ಣಪ್ಪ ಬಿನ್ ಚಿಕ್ಕನರಸಪ್ಪ ಕರಿಪಲ್ಲಿ, ರಾಯಲ್ಪಾಡು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು. | ಅಬ್ದುಲ್ ರಫಿ ಬಿನ್ ಅಬ್ದುಲ್ ಖಲೀಲ್, ಜಾಕಿರ್ ಹುಸೇನ್ ಮೊಹಲ್ಲ, ಶ್ರೀನಿವಾಸಪುರ. |
| | | | ಅಶ್ರೃಪ್ ಪಾಷ ಬಿನ್ ಖಾದರ್ ಪಾಷ, ಜಾಕಿರ್ ಹುಸೇನ್ ಮೊಹಲ್ಲ, ಶ್ರೀನಿವಾಸಪುರ. |
| 8 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಚಿಕ್ಕಬಳ್ಳಾಪುರ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು, ಚಿಕ್ಕಬಳ್ಳಾಪುರ | ತಮ್ಮಣ್ಣ ಬಿನ್ ಈರಣ್ಣ ಚಿಕ್ಕರಾಯಪ್ಪನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ. | ಎಂ. ಎಕ್ಬಾಲ್ ಬಿನ್ ಮಿಸ್ಕಿನ್ ಸಾಬ್, ಚಿಕ್ಕಬಳ್ಳಾಪುರ. |
| | | ಪಿ.ಹೆಚ್. ಮುನಿರಾಜು ಬಿನ್ ಹನಮಂತರಾಯಪ್ಪ, ಪಟ್ರೇನಹಳ್ಳಿ, ಚಿಕ್ಕಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ. | ಶ್ರೀನಿವಾಸ ಬಿನ್ ಮುನಿಯಪ್ಪ ನಂದಿ, ಚಿಕ್ಕಬಳ್ಳಾಪುರ |
| | | | ಎಸ್. ಚಾಂದ್ ಪಾಶ ಬಿನ್ ಲೇಟ್ ಸಾಬ್ ಜಾನ್ ಸಾಬ್, ಚಿಕ್ಕಬಳ್ಳಾಪುರ. |
| 9 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಸಂತೆಮಾರಹಳ್ಳಿ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಆರ್.ಎಸ್. ಪ್ರಸಾದ್ ಬಿನ್ ಡಿ.ಸಿ. ರಾಜು, ಸಂತೆಮರಹಳ್ಳಿ, ಚಾಮರಾಜನಗರ ತಾಲ್ಲೂಕು. | ಸಿದ್ದಯ್ಯ ಬಿನ್ ಲೇಟ್ ಚಾಮಯ್ಯ, ಚಂಗಚಹಳ್ಳಿ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. |
| | | ಎಂ. ಪ್ರಸನ್ನ ಬಿನ್ ಹೆಚ್.ಪಿ. ಮಲ್ಲಣ್ಣ, ಹೊನ್ನೂರು, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. | ಸಿ. ಶ್ರೀನಿವಾಸ ಪ್ರಸಾದ್ ಬಿನ್ ಎಂ. ಚಾಮಯ್ಯ, ಹೊನ್ನೂರು, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ. |
| | | | ಮಾದೇಗೌಡ ಬಿನ್ ಲೇಟ್ ಸುಬ್ಬೇಗೌಡ ಹೆಗ್ಗಡೆ ಹುಂಡಿ, ಯಳಂದೂರು ತಾ: ಚಾಮರಾಜನಗರ ಜಿಲ್ಲೆ. |
| 10 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಟಿ. ನರಸೀಪುರ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಮಹದೇವಪ್ಪ ಬಿನ್ ನಾಗನಮಾದೇಗೌಡ, ಕೆಂಪಯ್ಯಹುಂಡಿ. | ಜಮೀರ್ ಖಾನ್ ಬಿನ್ ಅಯೂಬ್ ಖಾನ್, ಮೂಗೂರು. |
| | | ಪ್ರಕಾಶ್ ಬಿನ್ ಮುದ್ದೇಗೌಡ, ಬೀ.ಸೀ. ಹಳ್ಳಿ, ಬನ್ನೂರು. | ರಿಯಾಜ್ ಅಹಮದ್ ಬಿನ್ ಅಬ್ದುಲ್ ಸಲ್ಡಾ, ಟಿ.ನರಸೀಪುರ. |
| | | | ಕೆ.ಆರ್. ಪುಟ್ಟಸ್ವಾಮಿ ಬಿನ್ ರಂಗಶೆಟ್ಟಿ, ಕನ್ನಹಳ್ಳಿಮಾಳೆ. |
| 11 | ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕಲಬುರಗಿ | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಸುರೇಶ ವೀರಯ್ಯಮಠಪತಿ, ಗೊಬ್ಬೂರ, ಅಫಜಲಪುರ ತಾಲ್ಲೂಕು. | ಸೀಮಾ ಅಂಜುಮ ಅಕ್ಬರ ಪಾಶಾ, ಜೇವರ್ಗಿ ತಾಲ್ಲೂಕು, ಕಲಬುರಗಿ ಜಿಲ್ಲೆ, ಪ್ರತಿನಿಧಿ ಅಕ್ಬರ ಪಾಶಾ. |
| | | ನಾಗರಾಜು ಶಿವರುದ್ರಪ್ಪ ಪಾಟೀಲ, ಕಲಬುರಗಿ ತಾಲ್ಲೂಕು. | ಶೈನಾಜಬೇಗಂ ಅಬ್ಬಲಮಿಯಾ, ಜೇವರ್ಗಿ ತಾಲ್ಲೂಕು, ಕಲಬುರಗಿ ಜಿಲ್ಲೆ. |
| | | | ಸವಿತನಾಗಯ್ಯ ವಿಭೂತಿ, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, ಪ್ರತಿನಿಧಿ ಶ್ರೀಮಂತ ಮಾಳಿಗೆ. |

| | | | |
|---|---|---|---|
| 12 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಶಿರಹಟ್ಟಿ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಹೆಚ್.ಎಂ. ದೇವಗಿರಿ, ಶಿರಹಟ್ಟಿ. | ಸಿ.ಎಸ್. ಅಕ್ಕಿ, ಶಿರಹಟ್ಟಿ. |
| | | ಎಂ.ವೈ. ಕರಿಗಾರ, ಶಿರಹಟ್ಟಿ. | |
| | | ವಿ.ಎಂ. ಕಲ್ಯಾಣಿ, ಶಿರಹಟ್ಟಿ. | ಅಸ್ಲಂ ಪಾಶಾ ಸಾಬ್ಜಾನಸಾಬ, ಶಿರಹಟ್ಟಿ. |
| | | ಎಫ್.ಎಸ್. ಕರಿಗಾರಿ, ಶಿರಹಟ್ಟಿ. | ಹುಸೇನಗೌಡ ಗೌಸಸಾಬ, ಮಾಚೇನಹಳ್ಳಿ, ಶಿರಹಟ್ಟಿ. |
| | | ಎಂ.ಸಿ. ಹಸಭಿಮಠ, ಮುಂಡರಗಿ. | |
| | | ಈ.ಬಿ. ಕಾಳಗಿ, ಶಿರಹಟ್ಟಿ. | |
| | | ಎನ್.ಜೆ. ಲಮಾಣಿ, ಮುಂಡರಗಿ. | |
| | | ಎಸ್.ಎಸ್. ಸಂಕಗೌಡ, ಗದಗ. | |
| 13 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೂಡ್ಲಗಿ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಆರ್. ವೀರಣ್ಣ ಬಿನ್ ಹಾಲಪ್ಪ, ಬಣವಿಕಲ್, ಕೂಡ್ಲಗಿ ತಾಲ್ಲೂಕು. | |
| | | ಹೆಚ್.ಕೆ. ಮಂಜುನಾಥ ಗೌಡ ಬಿನ್ ಅಜ್ಜನಗೌಡ, ಹಿರೇಕೇರನಹಳ್ಳಿ, ಸಂಡೂರು ತಾ:. | |
| | | ಕೆ. ಚಂದ್ರಶೇಖರ್ ಬಿನ್ ಕೆ. ಗುಂಡುರಾವ್, ಹಿರೇಹೆಗ್ದಾಳ್, ಕೂಡ್ಲಗಿ ತಾಲ್ಲೂಕು | |
| 14 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ಕೋಲಾರ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ವೆಂಕಟೇಶಪ್ಪ ಬಿನ್ ಗುಡಿಯಪ್ಪ ಕೋನೇಪುರ ಗ್ರಾಮ, ಮುದುವತ್ತಿ ಅಂಚೆ, ಕೋಲಾರ ತಾಲ್ಲೂಕು. | ಸಿರಾಜ್ ಅಹ್ಮದ್ ಅಲಿಯಾಸ್ ಬಾಬು ಬಿನ್ ಅಬ್ದುಲ್ ಖಾಲಕ್, ಮದೀನಾ ಮಸೀದಿ ಹತ್ತಿರ, ಷಾಹಿನ್ ಷಾ ನಗರ, ಕೋಲಾರ ತಾಲ್ಲೂಕು. |
| | | ಎಂ. ಗೋವಿಂದ ರಾಜು ಬಿನ್ ಮುನಿಸೊಣ್ಣಪ್ಪ ಅಂಕತಟ್ಟಿ ಗ್ರಾಮ, ಮಟ್ನಹಳ್ಳಿ ಅಂಚೆ, ಕೋಲಾರ ತಾಲ್ಲೂಕು. | ಮುನಾವರ್ ಬೇಗ್ ಬಿನ್ ಅಹ್ಮದ್ ಬೇಗ್, ಮೆಹಬೂಬ್ ನಗರ, ಚಿಕ್ಕಬಳ್ಳಾಪುರ ರಸ್ತೆ, ಕೋಲಾರ. |
| | | | ಸಿ.ಎಂ. ಮುನಿಯಪ್ಪ ಬಿನ್ ನಾರಾಯಣಪ್ಪ, ಚನ್ನಸಂದ್ರ ಗ್ರಾಮ, ಕ್ಯಾಲನೂರು ಅಂಚೆ, ಕೋಲಾರ ತಾಲ್ಲೂಕು. |
| 15 | **ಸರ್ಕಾರಿ ರೇಷ್ಮೆ ಗೂಡಿನ ಮಾರುಕಟ್ಟೆ, ರಾಮನಗರ** | | |
| | ರೇಷ್ಮೆ ಗೂಡಿನ ಮಾರುಕಟ್ಟೆ ಅಧಿಕಾರಿಗಳು | ಕೆ.ದೇವೇಗೌಡ ಬಿನ್ ಹನುಮಯ್ಯ, ಕೂಟಗಲ್ಲು, ರಾಮನಗರ. | ಮಹಮದ್ ಮೊಹಿಬ್ ಪಾಷ ಬಿನ್ ಮಹಮದ್ ಅನ್ವರ್, ಐಜೂರು, ರಾಮನಗರ. |
| | | ಪಾರ್ಥಸಾರಥಿ ಬಿನ್ ನಿಂಗೇಗೌಡ, ಹೊಸದೊಡ್ಡಿ, ರಾಮನಗರ ತಾಲ್ಲೂಕು. | ಹಬೀಬುಲ್ಲಾ ಖಾನ್ ಬಿನ್ ಅಬ್ದುಲ್ ರಹೀಮ್, ಗೌಸಿಯಾ ನಗರ, ರಾಮನಗರ. |
| | | | ಸಿ.ಆರ್. ಜಗದೀಶ್ ಬಿನ್ ಡಿ. ರವೀಂದ್ರನಾಥ, ಗೆಂಡಮಡು, ಎಲೇಕೇರಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ. |

**ಆರ್.ಎಲ್. ಚಿನ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ),
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

**P.R. 162**

## ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆರ್‌ಡಿ 01 ಎಲ್‌ಆರ್‌ಎಂ 2016, ಬೆಂಗಳೂರು, ದಿನಾಂಕ: 22.02.2016.**

**ವಿಷಯ :** ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ ಹಾಗೂ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 95ರಡಿ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಭೂ ಪರಿವರ್ತನೆ [ಪರಿಭಾವಿತ ಭೂ ಪರಿವರ್ತನೆ ಸೇರಿದಂತೆ] ಮಾಡುವ ಕಾರ್ಯವಿಧಾನವನ್ನು ಸರಳೀಕರಿಸುವ ಬಗ್ಗೆ

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 24 ಶಾಸನ 2014 ದಿನಾಂಕ: 28.08.2014.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 23 ಶಾಸನ 2015 ದಿನಾಂಕ: 13.08.2015.

3. ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ : 28.01.2016ರಂದು ನಡೆದ ಸಭೆಯ ನಡವಳಿಗಳು

4. ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 01 ಎಲ್‌ಆರ್‌ಎಂ 2016 ದಿನಾಂಕ: 03.02.2016

ಕೈಗಾರಿಕಾ ಉದ್ದೇಶಕ್ಕಾಗಿ ಪ್ರಾಯೋಜನೆಗಳನ್ನು ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ [State High Level Clearance Committee - SHLCC] / ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿ [State Level Single Window Clearance Committee - SLSWCC] ಮತ್ತು ಜಿಲ್ಲಾ ಮಟ್ಟದ ಏಕ ಗವಾಕ್ಷಿ ಅನುಮೋದನಾ ಸಮಿತಿ [District Level Single Window Clearance Committee - DLSWCC] ಅನುಮೋದಿಸಿದ ಪ್ರಸ್ತಾವನೆಗಳಲ್ಲಿ ಭೂ ಪರಿವರ್ತನಾ ಅನುಮತಿ ನೀಡುವ ನಿಟ್ಟಿನಲ್ಲಿ ವಿವಿಧ ಜಿಲ್ಲೆಗಳು ವಿವಿಧ ಕಾರ್ಯವಿಧಾನವನ್ನು ಅನುಸರಿಸುತ್ತಿರುವ ಕಾರಣ ವಿಳಂಬವಾಗುತ್ತಿದೆ. ಸದರಿ ಭೂ ಪರಿವರ್ತನಾ ಅನುಮತಿ [ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರಡಿ ಪರಿಭಾವಿತ ಭೂ ಪರಿವರ್ತನೆ ಅನುಮತಿ ಸೇರಿದಂತೆ] ನೀಡುವಿಕೆಯಲ್ಲಿ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಸದರಿ ವಿಳಂಬದಿಂದಾಗಿ ಪ್ರಾಯೋಜನೆಗೆ ನಿಗದಿಪಡಿಸಿರುವ ವೇಳೆಯಲ್ಲಿ ವಿಳಂಬ, ಪ್ರಾಯೋಜನೆಯ ವೆಚ್ಚದಲ್ಲಿ ಏರಿಕೆ ಸೇರಿದಂತೆ ಕೈಗಾರಿಕಾ ಪ್ರಾಯೋಜನೆಗಳು ಕೈತಪ್ಪಿ ಹೋಗುತ್ತಿರುವ ಪ್ರಸಂಗವು ಎದುರಾಗಿದೆ. ಆದುದರಿಂದ ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಅನುಮತಿ ನೀಡುವ ಬಗ್ಗೆ ಹಾಗೂ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 95ರಡಿ ಕೃಷಿಯೇತರ ಉದ್ದೇಶಗಳಿಗೆ ಭೂ ಪರಿವರ್ತನೆ ಮಾಡುವ ಕುರಿತು ಕಂದಾಯ ಇಲಾಖೆಯಲ್ಲಿ ಪ್ರಸ್ತುತ ಅನುಸರಿಸುತ್ತಿರುವ ಕಾರ್ಯವಿಧಾನವನ್ನು ಪರಾಮರ್ಶಿಸಲಾಗಿದೆ.

ಮುಂದುವರೆದು, Karnataka Industries [Facilitation] Act, 2002 ಮತ್ತು ನಿಯಮಗಳಡಿ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ / ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಗಳಿಗೆ ಕೈಗಾರಿಕಾ ಉದ್ದೇಶದ ಪ್ರಾಯೋಜನೆಗಳನ್ನು ಅನುಮೋದಿಸುವ ಅಧಿಕಾರವನ್ನು ನೀಡಲಾಗಿದೆ. ಅನೇಕ ಪ್ರಕರಣಗಳಲ್ಲಿ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಅನುಮೋದನೆ ಸಹ ಬೇಕಾಗಿದ್ದು, ಆ ದಿಸೆಯಲ್ಲಿ ಸರಳೀಕರಣಗೊಳಿಸುವ ಅವಶ್ಯಕತೆ ಇದೆ. ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಒಂದು ಸಲ ಅನುಮತಿಯನ್ನು ನೀಡಿದ ನಂತರ, ಪರಿಭಾವಿತ ಭೂ ಪರಿವರ್ತನಾ ಅನುಮತಿಯನ್ನು ನೀಡಲು ಉಲ್ಲೇಖಿತ (1) ಮತ್ತು (2)ರ ಅಧಿಸೂಚನೆಗಳಲ್ಲಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ಕ್ಕೆ ತಿದ್ದುಪಡಿಯನ್ನು ತರಲಾಗಿದೆ. ರಾಜ್ಯದಲ್ಲಿ ಕೃಷಿ ಚಟುವಟಿಕೆಗಳನ್ನು, ಅದರಲ್ಲೂ ವಿಶೇಷವಾಗಿ ಕೈಗಾರಿಕಾ ಚಟುವಟಿಕೆಗಳನ್ನು ಉತ್ತೇಜಿಸುವ ನಿಟ್ಟಿನಲ್ಲಿ ಕೃಷಿ ಭೂಮಿಯನ್ನು ಖರೀದಿಸಲು ಅನುವು ಮಾಡಿಕೊಡುವುದು ಸದರಿ ತಿದ್ದುಪಡಿಯ ಉದ್ದೇಶವಾಗಿರುತ್ತದೆ.

ಮೇಲ್ಕಂಡ ಅಂಶಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ: 28.01.2016ರಂದು ನಡೆದ ಸಭೆಯಲ್ಲಿ ಚರ್ಚಿಸಿ ಕರ್ನಾಟಕ ಭೂ ಸುಧಾರಣಾ ಕಾಯ್ದೆ, 1961ರ ಕಲಂ 109 ಅಡಿಯಲ್ಲಿ ಭೂ ಪರಿವರ್ತನೆ ಅನುಮತಿ ನೀಡಲು, ನಮೂನೆ 15ಎ ಮತ್ತು ಪರಿಭಾವಿತ ಭೂ ಪರಿವರ್ತನೆ ನಮೂನೆ ಸೇರಿದಂತೆ, ಅನುಸರಿಸುತ್ತಿರುವ ಪ್ರಸ್ತುತ ಕಾರ್ಯವಿಧಾನವನ್ನು ಸರಳೀಕರಣಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಸರಳೀಕರಿಸಿದ ಕಾರ್ಯವಿಧಾನ ಕೆಳಕಂಡಂತಿದೆ:–

ಎ) ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ / ರಾಜ್ಯ ಮಟ್ಟದ ಏಕಗವಾಕ್ಷಿ ಅನುಮೋದನಾ ಸಮಿತಿಯು ಕರ್ನಾಟಕ ಕೈಗಾರಿಕಾ ನೀತಿಯ ಅನುಸಾರ Karnataka Industries [Facilitation] Act, 2002 ಮತ್ತು ನಿಯಮಗಳನ್ವಯ ಕೈಗಾರಿಕಾ ಪ್ರಾಯೋಜನೆಗಳನ್ನು ಅನುಮೋದಿಸಿರುವ ಪ್ರಕರಣಗಳಿಗೆ ಸಂಬಂಧಿಸಿದಂತೆ:

(i) ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯು ನಿಗದಿತ ಪ್ರಾಧಿಕಾರ/ಜಿಲ್ಲಾಧಿಕಾರಿಗೆ ಅವಶ್ಯವಿರುವ ಮಾಹಿತಿಯನ್ನು ವಿದ್ಯುನ್ಮಾನದ [Electronically] ಮೂಲಕ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಅದರಲ್ಲಿ

ಎ) ಅರ್ಜಿದಾರನ ವಿವರಗಳು

ಬಿ) ಜಮೀನಿನ ಷೆಡ್ಯೂಲ್

ಸಿ) SHLCC/ SLSWCC ರವರ ಅನುಮೋದನಾ ಪತ್ರದ ಪ್ರತಿ

ಡಿ) ಪ್ರಾಯೋಜನಾ ವರದಿ ಅನ್ನು ಸಲ್ಲಿಸುವುದು.

(ii) ಪ್ರಸ್ತಾವಿತ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ [ಕೆಲವು ಜಮೀನುಗಳ ಪರಭಾರೆ ನಿಷೇಧ] ಕಾಯ್ದೆ, 1978ರ ವ್ಯಾಪ್ತಿಯೊಳಗೆ ಬರುವುದಿಲ್ಲವೆಂದು ಅಥವಾ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ಅಡಿಯಲ್ಲಿ ಪರಭಾರೆ/ಮಾರಾಟ ಇತ್ಯಾದಿ ಕುರಿತಂತೆ ಷರತ್ತುಗಳು ಇರುವುದಿಲ್ಲವೆಂದು ಅಥವಾ ಅರಣ್ಯ ಜಮೀನು ಅಥವಾ ಖರಾಬು ಜಮೀನು ಆಗಿರುವುದಿಲ್ಲವೆಂದು ಅರ್ಜಿದಾರ / ಕರ್ನಾಟಕ ಉದ್ಯೋಗ ಮಿತ್ರ ರವರು ಸಾಧ್ಯವಾದಷ್ಟು ಮಟ್ಟಿಗೆ ಖಾತರಿಪಡಿಸಿಕೊಳ್ಳತಕ್ಕದ್ದು. ಖರಾಬು ಜಮೀನಿಗೆ

ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 68ರಡಿಯಲ್ಲಿ ಸಂಬಂಧಪಟ್ಟ ಪ್ರಾಧಿಕಾರವು ಕ್ರಮವಹಿಸಬೇಕಾಗಿರುವುದರಿಂದ ಖರಾಬು ಜಮೀನುಗಳ ಕುರಿತಂತೆ ಸ್ಪಷ್ಟವಾಗಿ ಗುರುತಿಸಲು ಎಚ್ಚರಿಕೆ ವಹಿಸತಕ್ಕದ್ದು.

(iii) ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯು ಜಿಲ್ಲಾಧಿಕಾರಿಗಳಿಗೆ ಪ್ರಾಯೋಜನಾ ವರದಿ ಜೊತೆಗೆ ಜಮೀನುಗಳ ಆಡಿಟ್ [ಪರಿಶೋಧನೆ] ನಿಯಮಗಳನುಸಾರ ಆಗಿರುವ ಕುರಿತು ಪ್ರಮಾಣ ಪತ್ರದೊಂದಿಗೆ [certification] ಮಾಹಿತಿಯನ್ನು ಅಪ್‌ಲೋಡ್ ಮಾಡತಕ್ಕದ್ದು.

(iv) ಮೇಲ್ಕಂಡಂತೆ ಆನ್‌ಲೈನ್ ಮೂಲಕ ಸ್ವೀಕರಿಸಲಾದ ಮನವಿ ಮೇರೆಗೆ ಜಿಲ್ಲಾಧಿಕಾರಿರವರು;

(ಎ) ಅವಶ್ಯವಿರುವ ಜಮೀನಿನ ವಿಸ್ತೀರ್ಣ ಜಿಲ್ಲಾಧಿಕಾರಿರವರ ಅಧಿಕಾರ ವ್ಯಾಪ್ತಿಯೊಳಗೆ ಬರುವುದಾದಲ್ಲಿ, ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಅನುಮತಿಯನ್ನು ಏಳು ಕಾರ್ಯನಿರತ ದಿನಗಳ [working days] ಒಳಗಾಗಿ ನೀಡತಕ್ಕದ್ದು ಹಾಗೂ ಅದರಂತೆ ಮಾಹಿತಿಯನ್ನು ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆ ಮತ್ತು ಅರ್ಜಿದಾರನಿಗೆ ವಿದ್ಯುನ್ಮಾನದ ಮೂಲಕ ತಿಳಿಸತಕ್ಕದ್ದು.

(ಬಿ) ಅವಶ್ಯವಿರುವ ಜಮೀನಿನ ವಿಸ್ತೀರ್ಣ ಜಿಲ್ಲಾಧಿಕಾರಿರವರ ಅಧಿಕಾರ ವ್ಯಾಪ್ತಿಗೂ ಮೀರಿದ್ದಲ್ಲಿ, ಏಳು ದಿನಗಳ ಒಳಗಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಬೇಕು. ಸರ್ಕಾರವು ಅನುಮತಿಯನ್ನು 30 ದಿನಗಳ ಒಳಗೆ ನೀಡಬೇಕು ಮತ್ತು ಅದರಂತೆ ಕರ್ನಾಟಕ ಉದ್ಯೋಗ ಮಿತ್ರ ಹಾಗೂ ಅರ್ಜಿದಾರರಿಗೆ ವಿದ್ಯುನ್ಮಾನದ ಮೂಲಕ ತಿಳಿಸುವುದು.

(v) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಕೋರಿರುವ ಅನುಮತಿಯು ಒಂದು ವೇಳೆ ಈ ಕೆಳಗೆ ತಿಳಿಸಿದ ವಿಧಗಳಲ್ಲಿ ಬರುವುದಾದಲ್ಲಿ, ಆಗ ಜಿಲ್ಲಾಧಿಕಾರಿರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಏಳು ದಿನಗಳ ಒಳಗಾಗಿ ಕಳುಹಿಸತಕ್ಕದ್ದು ಹಾಗೂ ಸರ್ಕಾರವು ಎಂಟು ವಾರಗಳೊಳಗಾಗಿ ಅದರ ಮೇಲೆ ತೀರ್ಮಾನ ತೆಗೆದುಕೊಳ್ಳತಕ್ಕದ್ದು;

(ಎ) ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ [ಕೆಲವು ಜಮೀನುಗಳ ಪರಭಾರೆ ನಿಷೇಧ] ಕಾಯ್ದೆ, 1978ರಲ್ಲಿ ಕಲ್ಪಿಸಿರುವ ಅವಕಾಶದಂತೆ ಆಕರ್ಷಿಸುವ ಜಮೀನುಗಳು;

(ಬಿ) ಪರಭಾರೆ / ಮಾರಾಟ ಇತ್ಯಾದಿ ಕುರಿತಂತೆ ಷರತ್ತುಗಳನ್ನು ವಿಧಿಸಿ ಮಂಜೂರು ಮಾಡಿರುವ ಜಮೀನುಗಳನ್ನು ಮಾರಾಟ/ಪರಭಾರೆ ಮಾಡಲು ಸರ್ಕಾರದ ಅನುಮತಿ ಅವಶ್ಯವಿರುವುದನ್ನು ಒಳಗೊಂಡಂತಹ ಜಮೀನು;

(ಸಿ) ರಾಜ್ಯ ಸರ್ಕಾರದ ಸ್ವತಂತ್ರ ಶಾಸನ ಅಥವಾ ನಿಯಮ ಅಥವಾ ಅಧಿಸೂಚನೆ ಪ್ರಕಾರ ಯಾವುದೇ ಜಮೀನನ್ನು ಖರೀದಿಸಲು ಪ್ರತ್ಯೇಕ ಅನುಮತಿ ಅವಶ್ಯವಿರುವೆಡೆ ಅಂತಹ ಜಮೀನು ಖರೀದಿಗೆ ಸಂಬಂಧಪಟ್ಟ ಪ್ರಸ್ತಾವನೆಗಳು;

(vi) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಜಮೀನುಗಳನ್ನು ಖರೀದಿಸಲು ಅನುಮತಿ ನೀಡಿದ ನಂತರ, ಹೂಡಿಕೆದಾರರು ಮಾರಾಟ ಕ್ರಯ ಪತ್ರವನ್ನು ನೋಂದಣಿ ಮಾಡಲು ಕ್ರಮ ವಹಿಸತಕ್ಕದ್ದು. ಈ ಬಗ್ಗೆ ಕರ್ನಾಟಕ ಉದ್ಯೋಗ ಮಿತ್ರ / ಹೂಡಿಕೆದಾರರು ಆನ್‌ಲೈನ್ / ವಿದ್ಯುನ್ಮಾನದ ಮೂಲಕ ಜಿಲ್ಲಾಧಿಕಾರಿರವರಿಗೆ ತಿಳಿಸತಕ್ಕದ್ದು.

(vii) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಅನುಮತಿಯನ್ನು ನೀಡಿದ ನಂತರ, ಜಿಲ್ಲಾಧಿಕಾರಿರವರು ಪರಿವರ್ತನಾ ದಂಡ ಮತ್ತು ಇತರೆ ಶುಲ್ಕದ ಮೊತ್ತವನ್ನು ಪಾವತಿಸುವ ಕುರಿತಂತೆ ಅರ್ಜಿದಾರ / ಹೂಡಿಕೆದಾರ ಮತ್ತು ಕರ್ನಾಟಕ ಉದ್ಯೋಗ ಮಿತ್ರ ರವರಿಗೆ ತಿಳಿಸತಕ್ಕದ್ದು.

(viii) ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರಲ್ಲಿ ಕಲ್ಪಿಸಿರುವ ಅವಕಾಶಗಳಿಗೆ ಒಳಪಟ್ಟು ಜಿಲ್ಲಾಧಿಕಾರಿಗಳು 35 ದಿನಗಳ ಒಳಗಾಗಿ ಮ್ಯುಟೇಷನ್ ಮಾಡಲು ಕ್ರಮವಹಿಸತಕ್ಕದ್ದು.

(ix) ಮ್ಯುಟೇಷನ್ ಅನ್ನು ಕಂದಾಯ ದಾಖಲೆಗಳಲ್ಲಿ ನಮೂದಿಸಿದ ನಂತರ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 95ರ ಅಡಿಯಲ್ಲಿ ಪರಿಭಾವಿತ ಪರಿವರ್ತನಾ ಆದೇಶವನ್ನು, ಪರಿವರ್ತನಾ ದಂಡ ಮತ್ತು ಅವಶ್ಯವಿರುವ ಶುಲ್ಕವನ್ನು ಪಾವತಿಸಿರುವ ಬಗ್ಗೆ ದೃಢೀಕರಿಸಿಕೊಂಡು, ಏಳು ಕಾರ್ಯನಿರತ ದಿನಗಳ ಒಳಗಾಗಿ ಜಿಲ್ಲಾಧಿಕಾರಿರವರು ನೀಡತಕ್ಕದ್ದು.

(x) Karnataka Industries [Facilitation] Act, 2002 ಮತ್ತು ನಿಯಮಗಳಡಿ ರಚಿಸಲಾಗಿರುವ ವಿವಿಧ ಸಮಿತಿಗಳ ಸಭೆಗಳನ್ನು ಏರ್ಪಡಿಸುವ ಕೈಗಾರಿಕಾ ಇಲಾಖೆಯ ಸಂಬಂಧಪಟ್ಟ ಅಧಿಕಾರಿಗಳು Karnataka Town and Country Planning Act, 1961ರ ಪ್ರಕಾರ Comprehensive Development Plan / Outline Development Plan ನಲ್ಲಿನ ಅವಕಾಶಗಳನ್ನು ಪಾಲಿಸಿರುವ ಬಗ್ಗೆ, ಸಾಧ್ಯವಾದಷ್ಟು ಮಟ್ಟಿಗೆ, ಎಚ್ಚರಿಕೆ ವಹಿಸತಕ್ಕದ್ದು. ಇದರಲ್ಲಿ ಯಾವುದಾದರೂ ವ್ಯತ್ಯಯಗಳಿದ್ದಲ್ಲಿ SHLCC / SLSWCC ಮತ್ತು ಸಂಬಂಧಪಟ್ಟ ಪ್ರಾಧಿಕಾರದ ನಿರ್ದಿಷ್ಟ ಅನುಮೋದನೆಯನ್ನು ಪಡೆಯತಕ್ಕದ್ದು.

ಬಿ) ಕೈಗಾರಿಕೇತರ ಪ್ರಾಯೋಜನೆಗಳಿಗೆ ಸಂಬಂಧಿಸಿದಂತೆ ಕಲಂ 109ರ ಅಡಿಯಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸುವ ಬಗ್ಗೆ, ಅದನ್ನು 60 ದಿನಗಳೊಳಗಾಗಿ ತೀರ್ಮಾನಿಸತಕ್ಕದ್ದು.

ಸಿ) ರಾಜ್ಯ ಮಟ್ಟದಲ್ಲಿ ಅನುಮೋದನೆಗೊಂಡಿರುವ ಇಂಧನ ಇಲಾಖೆಯಡಿ ಬರುವ ಸೋಲಾರ್/ಕೈಗಾರಿಕಾ ಪ್ರಾಯೋಜನೆಗಳಿಗೆ ಸಂಬಂಧಿಸಿದಂತೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿ ಅನುಮತಿ ನೀಡಬೇಕಾಗಿರುವೆಡೆ ಮೇಲೆ ತಿಳಿಸಿದ ಕಾರ್ಯವಿಧಾನವನ್ನೇ ಅನುಸರಿಸತಕ್ಕದ್ದು. ಈ ದಿಸೆಯಲ್ಲಿ ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯ ಅಧಿಕೃತ ಅಧಿಕಾರಿಗಳು ಮೇಲೆ ವಿವರಿಸಿದಂತೆ ವಹಿಸುವ ಜವಾಬ್ದಾರಿಯ ರೀತ್ಯಾ Karnataka Renewable Energy Development Ltd. [KREDL] ನ ಅಧಿಕೃತ ಅಧಿಕಾರಿಗಳು ಸಹ ಪಾಲಿಸತಕ್ಕದ್ದು.

ಡಿ) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರ ಅಡಿಯಲ್ಲಿ ನೀಡಲಾಗುವ ಅನುಮತಿ ಕುರಿತ ವಿಷಯವನ್ನು 60 ದಿನಗಳ ಒಳಗಾಗಿ ಸೇವೆಯನ್ನು ನೀಡಲಾಗುವುದೆಂದು ಸಮಯಾವಕಾಶ ನಿಗದಿಪಡಿಸಿ **ಸಕಾಲ ಯೋಜನೆಯಡಿ** ತರುವುದು.

ಇ) ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109 ಮತ್ತು ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 95ರ ಅಡಿಯಲ್ಲಿ ಅನುಸರಿಸುತ್ತಿರುವ ಎಲ್ಲಾ ಕಾರ್ಯವಿಧಾನವನ್ನು ದಿನಾಂಕ: 31.03.2016ರ ವೇಳೆಗೆ ಆನ್‌ಲೈನ್‌ನಲ್ಲಿ ತಂದು ಸಂಪೂರ್ಣ ಮಾಹಿತಿಯು ಡಿಜಿಟಲ್ ಪ್ಲಾಟ್‌ಫಾರಂನಲ್ಲಿ ಸಾರ್ವಜನಿಕರಿಗೆ ದೊರೆಯುವಂತೆ ಮಾಡಲು ಕಂದಾಯ ಇಲಾಖೆಯು ಕ್ರಮವಹಿಸತಕ್ಕದ್ದು.

Karnataka Town and Country Planning Act, 1961ರ ಅಡಿಯಲ್ಲಿ Comprehensive Development Plan [CDP] / Outline Development Plan [ODP] ಅನ್ನು ತಯಾರಿಸಿ ಅಧಿಸೂಚನೆಯನ್ನು ಹೊರಡಿಸಿರುವಂತಹ ಪ್ರಕರಣಗಳಲ್ಲಿ ಜಮೀನುಗಳು ಕೃಷಿಯೇತರ ಚಟುವಟಿಕೆಗಳಿಗೆ ನಿಗದಿಪಡಿಸಿದಲ್ಲಿ [ಕೈಗಾರಿಕಾ/ವಾಣಿಜ್ಯ ಇತ್ಯಾದಿ] ಹಾಗೂ ಕಲಂ 109ರ ಅಡಿಯಲ್ಲಿ ಕೃಷಿ ಜಮೀನನ್ನು ಖರೀದಿಸಲು ಅನುಮತಿ ಕೋರಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿರುವ ಜಮೀನು ಸಿಡಿಪಿ/ಒಡಿಪಿ ಯಲ್ಲಿ ಅನುಮೋದಿಸಿ ನಿಗದಿಪಡಿಸಿರುವ ಉದ್ದೇಶಕ್ಕೆ ತಾಳೆಯಾಗುವ ಪ್ರದೇಶದ ವ್ಯಾಪ್ತಿಯೊಳಗಿದೆ ಎಂಬುದು ಖಾತ್ರಿಯಾದಲ್ಲಿ ಜಿಲ್ಲಾಧಿಕಾರಿಗಳು ಅರ್ಜಿ ಸಲ್ಲಿಸಿದ ಏಳು ಕಾರ್ಯನಿರತ ದಿನಗಳ ಒಳಗಾಗಿ ಕಲಂ 109ರ ಅಡಿಯಲ್ಲಿ ಅನುಮತಿಯನ್ನು ನೀಡತಕ್ಕದ್ದು. ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109ರಡಿಯಲ್ಲಿ ಅನುಮತಿಯನ್ನು ನೀಡಿದ ನಂತರ ಸದರಿ ಜಮೀನು ಅದೇ ಉದ್ದೇಶಕ್ಕೆ ಪರಿವರ್ತನೆಯಾಗಿದೆಯೆಂದು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ಕ್ಕೆ ಉಲ್ಲೇಖ (1) ಮತ್ತು (2)ರ ದಿನಾಂಕ: 28.08.2014 ಮತ್ತು ದಿನಾಂಕ: 13.08.2015ರ ಅಧಿಸೂಚನೆಗಳಲ್ಲಿ ತರಲಾದ ತಿದ್ದುಪಡಿಯನ್ವಯ ಪರಿಭಾವಿಸಿ ಮಾರಾಟ ಕರಾರು ಪತ್ರವನ್ನು ಆಧರಿಸಿ ಆರ್.ಟಿ.ಸಿ.ಯಲ್ಲಿ ಮ್ಯುಟೇಷನ್ ಆದ 03 ದಿನಗಳ ಒಳಗಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಡಿಯಲ್ಲಿ ಪರಿವರ್ತನಾ ಆದೇಶವನ್ನು ಜಿಲ್ಲಾಧಿಕಾರಿಗಳು ನೀಡತಕ್ಕದ್ದು.

ಈ ವಿಷಯದ ಬಗ್ಗೆ ಉಲ್ಲೇಖಿತ (4)ರಲ್ಲಿ ಹೊರಡಿಸಲಾದ ಸುತ್ತೋಲೆ ದಿನಾಂಕ: 03.02.2016ನ್ನು ಈ ಮೂಲಕ ಹಿಂಪಡೆಯುತ್ತಾ, ಮೇಲ್ಕಂಡಂತೆ ಪರಿಷ್ಕರಿಸಿದ ಸರಳೀಕೃತ ಕಾರ್ಯವಿಧಾನವನ್ನು ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳು ಕಟ್ಟುನಿಟ್ಟಾಗಿ ಅನುಸರಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

**ಡಾ.ಬಿ.ಬಸವರಾಜು**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ.

## REVENUE SECRETARIAT

### CIRCULAR

**No. RD 01 LRM 2016, Bengaluru, dated 22.02.2016.**

**Sub :** Permission to purchase Agricultural Land under Section 109 of the Karnataka Land Reforms Act, 1961 and Conversion of Agriculture Land for Non-agriculture purpose (including Deemed Conversion) under Section 95 of the Karnataka Land Revenue Act, 1964 - simplification of procedure - reg

**Ref :** (1) Government Notification No. DPAL 24 Shasana 2014 dated 28-08-2014.

(2) Government Notification No. DPAL 23 Shasana 2015 dated 13-08-2015.

(3) Proceedings of the Meeting held on 28-01-2016 under the Chairmanship of Chief Secretary to Government.

(4) Circular No.RD 01 LRM 2016 dated: 03.02.2016

It has come to the notice of the Government that there is inordinate delay in according necessary permission under section 109 of Karnataka Land Reforms Act, 1961 (including deemed conversion under the Karnataka Land Revenue Act, 1964) even in respect of projects cleared by the State High Level Clearance Committee (SHLCC) / State Level Single Window Clearance Committee (SLSWCC) / District Level Single Window Clearance Committee (DLSWCC) for Industrial purpose and there have been complaints about different procedures being followed in different Districts in this regard. The delay in obtaining permission under section 109 of Karnataka Land Reforms Act, 1961 along with deemed conversion under section 95 of Karnataka Land Revenue Act, 1964 is causing a lot of concern and leading to delay in project time and cost escalation as well as dropping of the industrial projects. Therefore, the procedure being followed in the Revenue Department regarding granting permission to purchase Agricultural Land under Section 109 of the Karnataka Land Reforms Act, 1961 and conversion of Agriculture Land for Non-agriculture purpose under Section 95 of the Karnataka Land Revenue Act, 1964 has been reviewed.

Further, it is observed that under the Karnataka Industries (Facilitation) Act, 2002 and Rules framed thereunder, the SHLCC / SLSWCC have been empowered to approve industrial projects. In many cases permission for purchase of land under Section 109 of the Karnataka Land Reforms Act, 1961, is also needed and same needs streamlining. Once permission under section 109 of the Karnataka Land Reforms Act 1961, has been granted, then conversion under section 95 of the Karnataka Land Revenue Act, 1964 as per the amendments to the Karnataka Land Revenue Act, 1964 referred to at (1) and (2) above is, now, deemed to have been granted. The objective of the said amendment is to encourage agricultural activities, especially industrial activity by purchasing agricultural land.

In the meeting held under the Chairmanship of the Chief Secretary to Government on 28-01-2016 the above issues were discussed and Government has decided that the current procedure adopted under Section 109 of the Karnataka Land Reforms Act,

1961 including form 15A and deemed conversion process consequent to purchase of agricultural land has to be streamlined. Accordingly, the simplified procedure is as follows:-

A) For Industrial projects cleared by SHLCC / SLSWCC vide Karnataka Industries (Facilitation) Act, 2002 and Rules under Industrial policy:-

i) The Karnataka Udyoga Mitra shall apply electronically to Deputy Commissioner concerned with the following information required by the prescribed Authority / Deputy Commissioner:

a) Applicant details

b) Land Schedule

c) Permission copy of SHLCC / SLSWCC

d) Project report

ii) The Applicant / Karnataka Udyoga Mitra shall ensure as far as possible the land required for setting of industry shall not cover such lands which attract provisions of the Karnataka SC/ST (Prevention of Transfer of Certain Lands) Act, 1978, [PTCL Act] or the lands not complying the alienation conditions of the Karnataka Land Grant Rules, 1969 or the forest lands or Kharab Land. In this regard care shall be taken to clearly identify Kharab Land for which the Authorities have to take action under Section 68 of the Karnataka Land Revenue Act, 1964.

iii) Karnataka Udyog Mitra shall upload and send to Deputy Commissioner the project report along with certification that the land audit has been done examining the extant rules.

iv) Upon receipt of above online request, Deputy Commissioner shall;

(a) If the extent of land required is within the powers of the Deputy Commissioner, issue permission under Section 109 of the Karnataka Land Reforms Act, 1961 within seven working days and inform Karnataka Udyoga Mitra and the Applicant electronically.

(b) If the extent of land required exceeds the power of Deputy Commissioner, then the proposal should be sent to Government within seven days. The permission by Government should be given within 30 days; and inform Karnataka Udyog Mitra and the Applicant electronically.

v) In case the permission to purchase agricultural land under Section 109 of the Karnataka Land Reforms Act, 1961, is sought for the type of lands mentioned below, then the Deputy Commissioner shall send the proposal to the Government within one week and the Government shall decide within eight weeks time;

(a) Lands which attracts the provisions of the Karnataka SC/ST (Prevention of Transfer of Certain Lands) Act, 1978;

(b) A granted land has a non-alienation condition needing the permission of the Government for alienation;

(c) Any land which requires a separate permission under independent Statute or Rule or Notification of the State Government for its purchase.

vi) Once due permission under Section 109 of the Karnataka Land Reforms Act, 1961 has been given for puchase of lands, the investor shall register the sale deeds and Karnataka Udyog Mitra / Investor shall inform the same online / electronically to Deputy Commissioner.

vii) Once permission under Section 109 of the Karnataka Land Reforms Act, 1961 has been issued, the Deputy Commissioner shall inform the Applicant / Investor and Udyog Mitra regarding the amount of Conversion fine and other fees to be paid.

viii) The Deputy Commissioner shall, subject to provisions of Karnataka Land Revenue Act, 1964, within 35 days get the mutation effected.

ix) On effecting the mutation of revenue records, the Deputy Commissioner shall issue a deemed conversion under Section 95 of the Karnataka Land Revenue Act, 1964 within seven working days after getting confirmation of payment of conversion fine and necessary fees.

x) The prescribed officers in Industries Department convening the various committees constituted vide the Karnataka Industries (Facilitation) Act, 2002 and Rules framed thereunder shall also take care to the extent possible Comprehensive Development Plan / Outline Development Plan under the Karnataka Town & Country Planning Act, 1961 are adhered to. In case of any variation, an explicit approval of the SHLCC / SLSWCC and relevant competent authorities shall be taken.

B) As regards the procedure to be followed under section 109, other than industrial projects, the same shall be decided within 60 days.

C) For projects cleared under solar / industrial projects under Energy Department which have been approved at the State level, where permission to purchase agricultural land under Section 109 of the Karnataka Land Reforms Act, 1961 is required, the same procedure as enunciated above shall be followed. The authorised officers of Karnataka Renewable Energy Development Limited (KREDL) shall play role corresponding to one played by Authorised Officers of Karnataka Udyog Mitra as explained above.

D) The permission under section 109 of the Karnataka Land Reforms Act, 1961 shall be brought under SAKALA with time prescribed for its delivery being within 60 days.

E) Revenue Department shall bring the entire procedure under Section 109 of the Karnataka Land Reforms Act, 1961 and under Section 95 of the Karnataka Land Revenue Act, 1964 online by 31st March 2016 and whole data shall be available to public on a digital platform.

In all cases where a Comprehensive Development Plan (CDP) / Outline Development Plan (ODP) under the Karnataka Town and Country Planning Act, 1961, is prepared and notified after due process, such lands which are earmarked for non-agricultural purposes (industrial / commercial etc.,), the Deputy Commissioner shall issue permission under Section 109 within seven working days of requisite application being filed for lands falling in such a zone provided the purpose of purchase of agricultural land matches with the purpose for which that area has been earmarked in the approved CDP / ODP. Now, once the permission under Section 109 of the Karnataka Land Reforms Act, 1961, has been accorded, then the said land be treated as deemed to have been converted for the same purpose as per the amendments made to the Karnataka Land Revenue Act, 1964, vide Government Notifications dated 28-08-2014 and 13-08-2015 referred at (1) and (2) above and Deputy Commissioner shall issue conversion order under Section 95 of the Karnataka Land Revenue Act, 1964, within 03 days of mutation in the RTC as per the registered sale deed.

The Circular dated: 03.02.2016 referred at (4) above is hereby withdrawn. All concerned officers are hereby directed to follow the above revised simplified procedure scrupulously.

**P.R. 332**

**SC-500**

**DR. B. BASAVARAAJU**
Principal Secretary to Government,
Revenue Department.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀಮತಿ ಚೇತನಾ ಮನೋರಾಜ್., ದ್ವಿತೀಯ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧದ ಶಿಸ್ತುಕ್ರಮದಲ್ಲಿ ದಂಡನೆಯನ್ನು ವಿಧಿಸುವ ಬಗ್ಗೆ.

**ಉಲ್ಲೇಖ:**
1) ಆದೇಶ ಸಂಖ್ಯೆ: ಡಿಟಿಇ/08/ಡಿಇಕ್ಯೂ (2)/2001 (ಭಾಗ–2), ದಿನಾಂಕ: 14.02.2013.
2) ಸರ್ಕಾರದ ಪತ್ರ ಸಂಖ್ಯೆ ಇಡಿ 90 ಡಿಟಿಇ 2011, ದಿನಾಂಕ: 20.02.2015,
3) ಜ್ಞಾಪನ ಸಂಖ್ಯೆ: ಡಿಟಿಇ/8/ಡಿಇಕ್ಯೂ (2) 2011, ದಿನಾಂಕ 02.03.2015, 06.05.2015 ಮತ್ತು 11.05.2015.
4) ಸರ್ಕಾರದ ಪತ್ರ ಸಂಖ್ಯೆ ಇಡಿ 90 ಡಿಟಿಇ 2011, ದಿನಾಂಕ: 17.08.2015.
5) ಪತ್ರ ಸಂಖ್ಯೆ: ಡಿಟಿಇ/8/ಡಿಇಕ್ಯೂ (2)/2001 (ಭಾಗ–2)/2465, ದಿನಾಂಕ: 03.10.2015.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಶ್ರೀಮತಿ ಚೇತನಾ ಮನೋರಾಜ್., ದ್ವಿತೀಯ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಯ, ಬೆಂಗಳೂರು ಹಾಗೂ ದಿವಂಗತ ಎಸ್.ಟಿ. ರಾಜಪ್ಪ., ಸಹಾಯಕ ನಿರ್ದೇಶಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರುಇವರುಗಳ ವಿರುದ್ಧ ಸಾರ್ವಜನಿಕರಿಗೆ ಕೆಲಸ ಕೊಡಿಸುವುದಾಗಿ ಹಣ ಪಡೆದು ಫೋರ್ಜರಿ ನೇಮಕಾತಿ ಆದೇಶ ನೀಡಿರುತ್ತಾರೆಂಬ ಆರೋಪ ಹಾಗೂ ನಿಯಮಬಾಹಿರ ಕೃತ್ಯದಲ್ಲಿ ಭಾಗಿಯಾಗಿರುತ್ತಾರೆಂಬ ಆರೋಪಗಳ ಸತ್ಯಾಸತ್ಯತೆಗಳ ಬಗ್ಗೆ ತನಿಖೆ ನಡೆಸಿ ವರದಿ ಸಲ್ಲಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಡಿ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದ ಶ್ರೀ ಎಂ. ಕೃಷ್ಣಪ್ಪ ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರು ಸಲ್ಲಿಸಿದ ದಿನಾಂಕ: 05.07.2011ರ ವಿಚಾರಣಾ ವರದಿಯಲ್ಲಿ ಶ್ರೀಮತಿ ಚೇತನಾ ಮನೋರಾಜ್., ರವರ ಆರೋಪಗಳು ಸಾಬೀತಾಗಿದ್ದ ಕಾರಣ ನಿಯಮಾನುಸಾರದಂತೆ ಇವರಿಗೆ ಜಾರಿ ಮಾಡಲಾದ ದಿನಾಂಕ 03.08.2011ರ 2ನೇ ಕಾರಣ ಕೇಳುವ ನೋಟೀಸಿಗೆ ಇವರು ಸಲ್ಲಿಸಿದ ದಿನಾಂಕ: 23.08.2011ರ ಹೇಳಿಕೆಯನ್ನು ಆಧರಿಸಿ, ಆರೋಪಗಳು ಸಾಬೀತಾಗಿರುವ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರ ಮತ್ತು ಪುರಾವೆಗಳನ್ನು ವಿಚಾರಣಾ ವರದಿಯಲ್ಲಿ ನಮೂದಿಸಲ್ಪಟ್ಟಿಲ್ಲವೆಂಬ ಕಾರಣ ನಮೂದಿಸಿ, ಆಡಳಿತಾಧಿಕಾರಿಗಳು ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರಿ, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ 11 (ಎ) (2) ನೇ ನಿಯಮದನ್ವಯ ವಿಚಾರಣಾ ವರದಿಯನ್ನು ಒಪ್ಪಲಾಗುವುದಿಲ್ಲವೆಂದು ಶ್ರೀಮತಿ ಚೇತನಾ ಮನೋರಾಜ್ ರವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ, ಆರೋಪಗಳು ಸಾಬೀತಾಗಿರುವ ವಿಚಾರಣಾ ವರದಿಯನ್ನು ಪರಿಗಣಿಸದೇ, ಶ್ರೀಮತಿ ಚೇತನಾ ಮನೋರಾಜ್., ರವರನ್ನು ದೋಷಮುಕ್ತಗೊಳಿಸಿ ತಾಂತಿಕ ಶಿಕ್ಷಣ ನಿರ್ದೇಶನಾಲಯದಿಂದ ಹೊರಡಿಸಲಾದ ಆದೇಶವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26 ರನ್ವಯ ರದ್ದುಪಡಿಸುತ್ತಾ, ವಿಚಾರಣಾ ವರದಿಯಂತೆ ಶ್ರೀಮತಿ ಚೇತನಾ ಮನೋರಾಜ್ ರವರಿಗೆ ನಿಯಮಾನುಸಾರ ದಂಡನೆ ವಿಧಿಸಿ ಆದೇಶ ಹೊರಡಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರಿಗೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಜ್ಞಾಪನಗಳಲ್ಲಿ ಆರೋಪಿತ ಸಿಬ್ಬಂದಿ ಶ್ರೀಮತಿ ಚೇತನಾ ಮನೋರಾಜ್., ರವರಿಗೆ ವಿಚಾರಣಾ ವರದಿಯ ಪ್ರತಿಯನ್ನು ಒದಗಿಸುತ್ತಾ, ಸಾಬೀತಾಗಿರುವ ಆರೋಪಗಳಿಗೆ ನಿಯಮಾನುಸಾರದಂತೆ ಸೂಕ್ತ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿ ನೀಡುವಂತೆ ತಿಳಿಸಲಾಗಿದೆ. ಇದಕ್ಕೆ ಆರೋಪಿತರು ನೀಡಿರುವ ದಿನಾಂಕ: 28.05.2015ರ ಲಿಖಿತ ಹೇಳಿಕೆಯಲ್ಲಿ ವಿಚಾರಣಾ ವರದಿಯು ದೋಷಪೂರಿತವಾಗಿದೆ ಎಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (4)ರ ಮೊತ್ತದಲ್ಲಿ, ಗ್ರೂಪ್–ಸಿ ವೃಂದದ ಸಿಬ್ಬಂದಿಯಾದ ಶ್ರೀಮತಿ ಚೇತನಾ ಮನೋರಾಜ್., ರವರ ಸಕ್ಷಮ ಪ್ರಾಧಿಕಾರವು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ–ಇವರಾಗಿರುವುದರಿಂದ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು. 1957ರ ನಿಯಮ 8 (vi) (vii) ಮತ್ತು (viii)ರ ಪ್ರಕಾರ ಯಾವುದಾದರೂ ದಂಡನೆ ವಿಧಿಸಿ ಆದೇಶ ಹೊರಡಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಇವರಿಗೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (5)ರ ಪತ್ರದಲ್ಲಿ ಶ್ರೀಮತಿ ಚೇತನಾ ಮನೋರಾಜ್., ದ್ವಿತೀಯ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಸರ್ಕಾರದ ಹಂತದಲ್ಲಿಯೇ ದಂಡನೆ ವಿಧಿಸಿ ಆದೇಶ ಹೊರಡಿಸುವಂತೆ ಪ್ರಸ್ತಾಪಿಸಲಾಗಿದೆ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 90 ಡಿಟಿಇ 2011, ಬೆಂಗಳೂರು, ದಿನಾಂಕ: 05 ನೇ ಏಪ್ರಿಲ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳು ಹಾಗೂ ಸನ್ನಿವೇಶಗಳ ಹಿನ್ನೆಲೆಯಲ್ಲಿ, ಸರ್ಕಾರವು ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇಲ್ಲಿ ಈ ಹಿಂದೆ ನಡೆದಿದ್ದ ನಕಲಿ ನೇಮಕಾತಿ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀಮತಿ ಚೇತನಾ ಮನೋರಾಜ್., ದ್ವಿತೀಯ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು–ಇವರ ವಿರುದ್ಧದ ಆರೋಪಗಳಿಗೆ ಶ್ರೀ.ಎಂ. ಕೃಷ್ಣಪ್ಪ., ನಿವೃತ್ತ ಜಿಲ್ಲಾ ನ್ಯಾಯಾಧೀಶರು, ರವರು ವಿಚಾರಣೆ ನಡೆಸಿ ಸಲ್ಲಿಸಿದ ದಿನಾಂಕ: 05.07.2011ರ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಪರಿಗಣಿಸಿ, ಈ ಬಗ್ಗೆ ಆದೇಶ ಸಂಖ್ಯೆ ; ಡಿಟಿಇ/08/ಡಿಇಕ್ಯೂ (2)/ 2001 (ಭಾಗ–2), ದಿನಾಂಕ: 14.02.2013ರ ಆದೇಶವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 26ರಡಿ ಪ್ರದತ್ತವಾದ ಅಧಿಕಾರದನ್ವಯ ರದ್ದುಪಡಿಸಿದೆ ಹಾಗೂ ಇದೇ ನಿಯಮದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇದೇ ನಿಯಮಗಳ ನಿಯಮ 8 (vi) ರನ್ವಯ ಶ್ರೀಮತಿ ಚೇತನಾ ಮನೋರಾಜ್., ದ್ವಿತೀಯ ದರ್ಜೆ ಸಹಾಯಕರು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಕಡ್ಡಾಯ ನಿವೃತ್ತಿ ದಂಡನೆಯನ್ನು ವಿಧಿಸಿ ಆದೇಶಿಸಿದೆ.

**P.R.303**
**S.C.50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ. (ತಾಂತ್ರಿಕ ಶಿಕ್ಷಣ)

## ಕಂದಾಯ ಸಚಿವಾಲಯ

**ವಿಷಯ:** ಟೆಂಡರ್ ಬುಲೆಟಿನ್ ಅಧಿಕಾರಿಯನ್ನು ನೇಮಿಸುವ ಕುರಿತು ಆದೇಶ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ ಕಂಇ 119 ಎಂ.ಆರ್.ಆರ್ 2012 ದಿನಾಂಕ: 06.12.2012
2) ಸಹಾಯಕ ಆಯುಕ್ತರು, ಭೂದಾಖಲೆಗಳ ಆಧುನೀಕರಣ, ಭೂಮಿ ಉಸ್ತುವಾರಿ ಕೋಶ, ಇವರ ಪತ್ರ ಸಂಖ್ಯೆ: ಬಿಎಂಸಿ/ಪಿ.ಎಲ್.ಓ/33/2015–16 ದಿನಾಂಕ: 06.02.2016.

**ಪ್ರಸ್ತಾವನೆ:–**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರವು ಕಂದಾಯ ಇಲಾಖೆಯ ಭೂಮಿ ಮತ್ತು ಯು.ಪಿ.ಓ.ಆರ್. ಯೋಜನೆಗಳಡಿಯಲ್ಲಿ ಕರೆಯಲಾಗುವ ಎಲ್ಲಾ ಟೆಂಡರ್‌ಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ವಯ ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಟೆಂಡರ್ ಪರಿಶೀಲನಾ ಸಮಿತಿ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವನ್ನು ನೇಮಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಸಹಾಯಕ ಆಯುಕ್ತರು, ಭೂದಾಖಲೆಗಳ ಆಧುನೀಕರಣ, ಭೂಮಿ ಉಸ್ತುವಾರಿ ಇವರ ಪ್ರಸ್ತಾವನೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 101 ಎಂ.ಆರ್.ಆರ್ 2015 ದಿನಾಂಕ 24.08.2015 ರನ್ವಯ ಕಾಗದ ರಹಿತ ಕಛೇರಿ ವ್ಯವಸ್ಥೆಯನ್ನು ಜಾರಿಗೊಳಿಸಲು ಆದೇಶಿಸಲಾಗಿದ್ದು, ಸದರಿ ವ್ಯವಸ್ಥೆಯನ್ನು ಜಾರಿಗೊಳಿಸಲು ಡೆಸ್ಕ್‌ಟಾಪ್ ಮತ್ತು ಲ್ಯಾಪ್‌ಟಾಪ್‌ಗಳನ್ನು ಖರೀದಿಸುವ ಅವಶ್ಯವಿರುವುದರಿಂದ, ಪ್ರಸ್ತುತ ಯಶಸ್ವಿ ಸಂಸ್ಥೆಗಳಿಂದ ಹಾರ್ಡ್‌ವೇರ್ ಉಪಕರಣಗಳನ್ನು ಖರೀದಿಸಲು ಅಲ್ಪಾವಧಿ ಟೆಂಡರ್ ಆಹ್ವಾನಿಸಿದ್ದು, ಸದರಿ ಅಲ್ಪಾವಧಿ ಟೆಂಡರ್ ಅಧಿಸೂಚನೆಯನ್ನು ರಾಜ್ಯ ಬುಲೆಟಿನ್ ಪತ್ರಿಕೆಯಲ್ಲಿ ಪ್ರಕಟಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 101 ಎಂಆರ್‌ಆರ್ 2015 (ಭಾಗ–2) ಬೆಂಗಳೂರು ದಿನಾಂಕ: 26.03.2016**

ಪ್ರಸ್ತಾವನೆಯಲ್ಲಿ ವಿವರಿಸುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಾವಳಿ 1999ರ ನಿಯಮ 7 ರನ್ವಯ ಸರ್ಕಾರದ ಉಪ ಕಾರ್ಯದರ್ಶಿಗಳು. ಕಂದಾಯ ಇಲಾಖೆ (ಭೂಮಿ & ಯುಪಿಓಆರ್, ಮುಜರಾಯಿ) ಇವರನ್ನು ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿಯನ್ನಾಗಿ ನೇಮಿಸಿದೆ.

ಕಾಗದ ರಹಿತ ಕಛೇರಿ ವ್ಯವಸ್ಥೆಯನ್ನು ಜಾರಿಗೊಳಿಸಲು ಡೆಸ್ಕ್‌ಟಾಪ್ ಮತ್ತು ಲ್ಯಾಪ್‌ಟಾಪ್‌ಗಳನ್ನು ಖರೀದಿಸುವ ಅವಶ್ಯವಿರುವುದರಿಂದ, ಪ್ರಸ್ತುತ ಯಶಸ್ವಿ ಸಂಸ್ಥೆಗಳಿಂದ ಹಾರ್ಡ್‌ವೇರ್ ಉಪಕರಣಗಳನ್ನು ಖರೀದಿಸಲು ಅಲ್ಪಾವಧಿ ಟೆಂಡರ್ ಆಹ್ವಾನಿಸಿದ್ದು, ಸದರಿ ಅಲ್ಪಾವಧಿ ಟೆಂಡರ್ ಅಧಿಸೂಚನೆಯನ್ನು ರಾಜ್ಯ ಬುಲೆಟಿನ್ ಪತ್ರಿಕೆಯಲ್ಲಿ ಪ್ರಕಟಿಸಲು ಆದೇಶಿಸಿದೆ.

**P.R.304**
**S.C.100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ತಿಪ್ಪೀರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ
(ಭೂಮಿ & ಯು.ಪಿ.ಓ.ಆರ್) ಕಂದಾಯ ಇಲಾಖೆ

## ಸಹಕಾರ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಸಿಒ 186 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 29.03.2016.**

ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಕೋರಿರುವಂತೆ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಉಳಿತಾಯವಾಗುವ ಮೊತ್ತ ರೂ. 3262.25 ಲಕ್ಷಗಳನ್ನು ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಡಿ ಬಿಡುಗಡೆಗೊಳಿಸಲು ಕೋರಿದ್ದು, ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸಿಒ 186 ಸಿಎಲ್‌ಎಸ್ 2015, ದಿನಾಂಕ: 15.03.2016 ಆದೇಶದಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಲಾಗಿತ್ತು.

**ಯೋಜನೆ: ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಲೆಕ್ಕ ಶೀರ್ಷಿಕೆ: 2425–00–107–2–41**

(ರೂ. ಲಕ್ಷಗಳಲ್ಲಿ)

| | |
|---|---|
| **106– ಸಾಮಾನ್ಯ** | **2730.75** |
| **422– ವಿಶೇಷ ಘಟಕ ಯೋಜನೆ** | **280.50** |
| **423–ಗಿರಿಜನ ಉಪ ಯೋಜನೆ** | **251.00** |
| **ಒಟ್ಟು** | **3262.25** |

ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸಾಮಾನ್ಯ ಲೆಕ್ಕ ಶೀರ್ಷಿಕೆಯಡಿ ರೂ.2730.75 ಲಕ್ಷ ಬದಲಿಗೆ ರೂ.1181.75ಲಕ್ಷಗಳು ಮಾತ್ರ ಲಭ್ಯವಿದ್ದು. ರೂ. 2730.75 ಲಕ್ಷಗಳ ಬದಲಿಗೆ ರೂ. 1181.75ಲಕ್ಷ ಬದಲಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಇವರ ಕೋರಿಕೆಯನ್ನು ಪುರಸ್ಕರಿಸಿ, ಸರ್ಕಾರದ ಆದೇಶ ಸಂಖ್ಯೆ: ಸಿಒ 186 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 15.03.2016 ರ ಆದೇಶದಲ್ಲಿನ ಸಾಮಾನ್ಯ ಲೆಕ್ಕ ಶೀರ್ಷಿಕೆ ಅನುದಾನದ ಮೊತ್ತವನ್ನು ಬದಲಾಯಿಸಿ, ಕೆಳಕಂಡಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

**ಯೋಜನೆ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಲೆಕ್ಕ ಶೀರ್ಷಿಕೆ: 2425–00–107–2–41**

(ರೂ. ಲಕ್ಷಗಳಲ್ಲಿ)

| | |
|---|---|
| **106 ಸಾಮಾನ್ಯ** | **1181.75** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ಅಪರ ನಿಬಂಧಕರು (ಹೈನುಗಾರಿಕೆ) ಮೇಲು ರುಜು ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ: 19.01.2016 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

**P.R.305**
**S.C.25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ – 3,
ಸಹಕಾರ ಇಲಾಖೆ

## FINANCE SECRETARIAT.

**Sub:** Dearness Allownance to Teaching Staff on **UGC/AICTE/ICAR** scales of pay and Judicial Officers/Pensioners on **NJPC** pay scales-Revision of rates.

**Read**:
1) G.O. No. FD 10 SRP 2013, dated 20-05-2013.
2) G.O. No. FD 12 SRP 2013 (II), dated 12-06-2013.
3) G.O. No. FD 22 SRP 2013, dated 10-10-2013.
4) G.O. No. FD 07 SRP 2014, dated 11-04-2014.
5) G.O. No. FD 18 SRP 2014, dated 01-10-2014.
6) G.O. No. FD 12 SRP 2015, dated 08-05-2015.
7) G.O. No. FD 19 SRP 2015, dated: 08-10-2015.

**GOVERNMENT ORDER NO. FD 18 SRP 2016, BENGALURU, DATED 18TH APRIL 2016**

Government are pleased to sanction increase in the rates, of Dearness Allowance to Teaching Staff who are on UGC/AICTE/ICAR scales of pay and to Judicial Officers on NJPC pay scales from the existing **119% to 125%** of the basic pay with effect from **Ist January 2016.**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



2. For the purpose of this order, the term 'Basic Pay' means, the pay drawn by a Government employee in the UGC/AICTE/ICAR and NJPC scales of pay applicable to the post held by him.
3. Basic Pay shall not include any other emoluments.
4. Government are also pleased to sanction increase in the rates of Dearness Allowance to NJPC Pensioners/Family Pensioners from the exising **119% to 125%** of the basic pension/family pension with effect **from Ist January 2016.**
5. The increase in Dearness Allowance admissible under this order is payable in cash until furher Orders.
6. The Payment on account of Dearness Allownace involving fractions of 50 paise and above shall be rounded off to the next rupee and fractions less than 50 paise shall be ignored.
7. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka
**K.S. RAJALAKSHMI**
Under Secretary to Government,
Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ :** ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/ಎನ್‌ಜೆಪಿಸಿ ನಿವೃತ್ತಿ ವೇತನದಾರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸ.ಆ. ಸಂಖ್ಯೆ: ಎಫ್‌ಡಿ 10 ಎಸ್‌ಆರ್‌ಪಿ 2013, ದಿನಾಂಕ: 20–05–2013.
2. ಸ.ಆ. ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2013, (II), ದಿನಾಂಕ: 12–06–2013.
3. ಸ.ಆ. ಸಂಖ್ಯೆ: ಎಫ್‌ಡಿ 22 ಎಸ್‌ಆರ್‌ಪಿ 2013, ದಿನಾಂಕ: 10–10–2013.
4. ಸ.ಆ. ಸಂಖ್ಯೆ: ಎಫ್‌ಡಿ 07 ಎಸ್‌ಆರ್‌ಪಿ 2014, ದಿನಾಂಕ: 11–04–2014.
5. ಸ.ಆ. ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 2014, ದಿನಾಂಕ: 01–10–2014.
6. ಸ.ಆ. ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಪಿ 2015, ದಿನಾಂಕ: 08–05–2015.
7. ಸ.ಆ. ಸಂಖ್ಯೆ: ಎಫ್‌ಡಿ 19 ಎಸ್‌ಆರ್‌ಪಿ 2015 ದಿನಾಂಕ: 08–10–2015.

**ಸರ್ಕಾರಿ ಆದೇಶ ಸಂಖ್ಯೆ: ಆಇ 18 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2016.**

ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ **ಶೇ. 119** ರಿಂದ **ಶೇ. 125ಕ್ಕೆ** ಹೆಚ್ಚಿಸಿ ದಿನಾಂಕ **1ನೇ ಜನವರಿ 2016** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ **'ಮೂಲ ವೇತನ'** ಎಂದರೆ ಸರ್ಕಾರಿ ನೌಕರರು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

3. ಮೂಲ ವೇತನಕ್ಕೆ ಇನ್ನಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

4. ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿ ಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇ. 119 ರಿಂದ ಶೇ. 125**ಕ್ಕೆ ಹೆಚ್ಚಿಸಿ ದಿನಾಂಕ **1ನೇ ಜನವರಿ 2016** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ, (ಸೇವೆಗಳು–2).

**P.R.306**
**SC-50**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59